ಲೇಖನಗಳನ್ನು ಕಾಗದದ ಒಂದೇ ಮಗ್ಗುಲಿಗೆ ಸ್ಫುಟವಾಗಿ ಬರೆದು ಕಳುಹಿಸಬೇಕು. ಸಾದರ ಸ್ವೀಕಾರ ಮತ್ತು ರಿವ್ಯೂಗಾಗಿ ಪುಸ್ತಕಗಳನ್ನು ಕಳುಹಿಸುವಾಗ ಎರಡು ಪ್ರತಿಗಳನ್ನು ಕಳುಹಿಸಿ. ಆಯ್ದ ಪುಸ್ತಕಗಳನ್ನು ರಿವ್ಯೂ ಮಾಡಲಾಗುವುದು.

ಲೇಖನ / ರಿವ್ಯೂಗಾಗಿ ಪುಸ್ತಕಗಳನ್ನು ಕಳುಹಿಸುವ ವಿಳಾಸ-

ಗಂಗಾಧರ ಮೂರ್ತಿ
6 (2), ಬೀಜಿಟಿ ಬಿಲ್ಡಿಂಗ್ಸ್
ಧನಲಕ್ಷ್ಮಿ ಗಿರಣಿ ಹಿಂಭಾಗ
ಶ್ರೀನಗರ, ಗೌರಿಬಿದನೂರು-561 208

ಚಂದಾ ಮತ್ತು ವ್ಯವಹಾರ-

ಸಮುದಾಯ ವಾರ್ತಾಪತ್ರ
46, ಅಂಗಡಿಬೀದಿ, ಬಸವನಗುಡಿ
ಬೆಂಗಳೂರು-560 004

ವಾರ್ಷಿಕ ಚಂದಾ ರೂ. 15 ಅಜೀವ ಚಂದಾ ರೂ. 200

ಬಿಡಿ ಪ್ರತಿ ರೂ. 1-50

## ಓದುಗರಲ್ಲಿ ವಿನಂತಿ.

ಕೆಲವು ತಾಂತ್ರಿಕ ಅಡಚಣೆಗಳಿಂದಾಗಿ 'ಸಮುದಾಯ ವಾರ್ತಾಪತ್ರ'ದ ಫೆಬ್ರವರಿ ಸಂಚಿಕೆ ತಡವಾಗಿ ಬಿಡುಗಡೆಯಾಗುತ್ತಿರುವುದಕ್ಕೆ ವಿಷಾದವನ್ನು ವ್ಯಕ್ತಪಡಿಸುತ್ತೇವೆ. ಮಾರ್ಚ್ ಮತ್ತು ಏಪ್ರಿಲ್ ಸಂಚಿಕೆಗಳೂ ಇಷ್ಟರಲ್ಲೇ ಹೊರ ಬೀಳಲಿವೆ.

—ವ್ಯವಸ್ಥಾಪಕ ಸಂಪಾದಕ.

# ಸಮುದಾಯ ವಾರ್ತಾಪತ್ರ 57 ಫೆಬ್ರವರಿ 1984

ಸಂಪಾದಕ

ಗಂಗಾಧರಮೂರ್ತಿ

ವ್ಯವಸ್ಥಾಪಕ ಸಂಪಾದಕ

ಪ್ರದೀಪ್

ಪ್ರಸಾರ ವ್ಯವಸ್ಥಾಪಕ

ಎಸ್. ಸಿ. ನರಸಿಂಹಯ್ಯ

ಈ ಸಂಚಿಕೆಯಲ್ಲಿ...............



ಮುಖಪುಟ ವಿನ್ಯಾಸ : ವೇಣು


ಮುದ್ರಕರು–ಪ್ರಕಟಣೆ : ಪಿ. ಗಂಗಾಧರಸ್ವಾಮಿ, ಪ್ರಧಾನ ಕಾರ್ಯದರ್ಶಿ,
ಸಮುದಾಯ ಸಮನ್ವಯ ಸಮಿತಿ (ರಿ) 46, ಅಂಗಡಿ ಬೀದಿ, ಬಸವನಗುಡಿ,
ಬೆಂಗಳೂರು-4

ಮುದ್ರಣ : ಶಾಲಿವಾಹನ ಮುದ್ರಕರು ಮತ್ತು ಪ್ರಕಾಶಕರು ಬೆಂಗಳೂರು-19

# ಜನಪದ ಸಾಹಿತ್ಯ ಮತ್ತು ಸಂಸ್ಕೃತಿ

ಜಿ. ಆರ್. ತಿಪ್ಪೇಸ್ವಾಮಿ

ಸಂಸ್ಕೃತಿಯನ್ನು ಕುರಿತಂತೆ ನಾನಾ ರೀತಿಯ ವ್ಯಾಖ್ಯಾನಗಳು ಈಗಾಗಲೇ ಹೊರಬಿದ್ದಿವೆ. ಅವನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಸಂಸ್ಕೃತಿ ಎಂಬುದು ಮನುಷ್ಯನ ಸಮಸ್ತ ಸಾಮಾಜಿಕ ಪರಂಪರೆಯನ್ನು ಒಳಗೊಂಡಿರುತ್ತದೆ. ಪರಂಪರಾಗತವಾಗಿ ಬಂದಿರುವ ಆಚರಣೆ-ನಡವಳಿಕೆಗಳ ಮೊತ್ತ. ಇದು ವ್ಯಕ್ತಿಯ ಬದುಕಿನ ಪ್ರತಿಹಂತದಲ್ಲೂ ಪ್ರಕಟವಾಗುವಂಥದ್ದು. ಜಾನಪದ ವಿದ್ವಾಂಸರು ಸಂಸ್ಕೃತಿಯನ್ನು ಶುದ್ಧ ಜನಪದ ಸಂಸ್ಕೃತಿ, ಮಧ್ಯಮ ಸಂಸ್ಕೃತಿ, ಪ್ರೌಢ ಸಂಸ್ಕೃತಿ-ಎಂದು ಮೂರು ವಿಧಗಳಲ್ಲಿ ಗುರುತಿಸಿದ್ದಾರೆ. "ಪರಿಮಿತವಾದ ವ್ಯಾಪ್ತಿಯಲ್ಲಿ ಗೊತ್ತಾದ ಕೆಲವು ಪುರೋಹಿತ ವರ್ಗದವರಿಂದ, ರಾಜನೀತಿಜ್ಞರಿಂದ, ವಿಜ್ಞಾನಿಗಳಿಂದ, ಧಾರ್ಮಿಕ ಪುರುಷರಿಂದ, ಕವಿಗಳಿಂದ ಕಲಾವಿದರಿಂದ ನಿರ್ಮಿತವಾಗುವಂಥದ್ದನ್ನು" (ಡಾ. ಜೀಶಂಪ) ಪ್ರೌಢ ಸಂಸ್ಕೃತಿ ಎಂದು ಕರೆದರು. ಈ ಹಂತದಲ್ಲಿ ವ್ಯಕ್ತವಾಗುವ ಸಂಸ್ಕೃತಿಯು ಪ್ರತಿ ಎಳೆಯೂ ವಿಧಿಸಲ್ಪಟ್ಟಿದ್ದಾಗಿರುತ್ತದೆ. ಅಂದರೆ ಸೃಷ್ಟಿಕರ್ತ ಒಬ್ಬನಾಗಿದ್ದು ಆತನ ಅಭಿಪ್ರಾಯಗಳಿಗೆ ಅನೇಕರ ವ್ಯಕ್ತಿತ್ವವು ಬಲಿಯಾಗಿರುತ್ತದೆ. ಹಲವರ ವ್ಯಕ್ತಿತ್ವವನ್ನು ತನ್ನತ್ತ ಸೆಳೆದುಕೊಳ್ಳಬಲ್ಲಂಥ ಪ್ರತಿಷ್ಠಿತ ವ್ಯಕ್ತಿಯ ಪ್ರಭಾವಕ್ಕೆ ಸಿಲುಕಿ ತನ್ನನ್ನು ಪೂರ್ಣವಾಗಿ ಒಪ್ಪಿಸಿಕೊಳ್ಳುವ ಸಾಧ್ಯತೆಗಳೇ ಬಹುಪಾಲಿರುತ್ತವೆ. ಈ ವಿವರಣೆಗೆ ಭಿನ್ನವಾದದು ಜನಪದ ಸಂಸ್ಕೃತಿ. ಇದು ಸಮಷ್ಟಿಯಿಂದ ಅಂಗೀಕರಿಸಲ್ಪಟ್ಟ ನಂಬಿಕೆ, ಹಾಡು, ಸಂಪ್ರದಾಯ, ಆಚರಣೆ ಮೊದಲಾದುವುಗಳ ಅರಿವು ಮತ್ತು ಜ್ಞಾನಕ್ಕೆ ಸಂಬಂಧಪಟ್ಟದ್ದು. ಇವುಗಳಿಗೆ ಬದ್ಧನಾಗಿರುವಂಥವನು ಮಾತ್ರ ಜನಪದ ಸಂಸ್ಕೃತಿಯಲ್ಲಿ ಕಾಣಿಸಿಕೊಳ್ಳುತ್ತಾನೆ. ಈ ಸಂಸ್ಕೃತಿ ಮಣ್ಣಿನ ವಾಸನೆಯಿಂದ ಕೂಡಿದ್ದು ಬದುಕಿನೊಡನೆ ನಿಕಟ ಸಂಪರ್ಕ

ವನ್ನು ಹೊಂದಿರುತ್ತದೆ. ಆತ್ಮೀಯ ವಾತಾವರಣವನ್ನು ಒಳಗೊಂಡಿರುತ್ತದೆ. ಅಲ್ಲದೆ ಜನಪದ ಸಂಸ್ಕೃತಿಯ ಪ್ರಾತಿನಿಧಿಕ ರೂಪಗಳಾದ ಮನುಷ್ಯನ ಬದುಕಿನ ಒಂದೊಂದು ಕ್ಷಣದಲ್ಲೂ ವ್ಯಕ್ತವಾಗುವ ಮಾತು, ನಂಬಿಕೆ, ಆಚರಣೆ, ಸಂಪ್ರದಾಯ ಇತ್ಯಾದಿ—ಇಂಥ ಬೇರುಗಳನ್ನು ಅಲುಗಾಡಿಸಿದ ವ್ಯಕ್ತಿಯನ್ನು ಸಮಾಜ ವಿರೋಧಿ ಸುತ್ತದೆ, ಬಹಿಷ್ಕಾರ ಹಾಕುತ್ತದೆ. ಇಂಥ ಬಿಗಿ ಚೌಕಟ್ಟು ಜನಪದ ಸಂಸ್ಕೃತಿಗಿದೆ.

ಅನೇಕ ವೇಳೆ ಶಿಷ್ಟ ಮತ್ತು ಜನಪದ ಸಂಸ್ಕೃತಿಗಳ ಮಧ್ಯೆ ಗುರುತಿಸಲಾರ ದಷ್ಟು ಸಂಬಂಧವಿರುತ್ತದೆ. ಇವೆರಡರ ಮಿಶ್ರ ಸಂಸ್ಕೃತಿಯನ್ನು ಕಾಣುತ್ತೇವೆ. ಜನಪದ ಸಂಸ್ಕೃತಿಯ ಆಕರ್ಷಣೆಗೊಳಗಾದ ಸಂದರ್ಭದಲ್ಲಿಯೇ ನಾಗರೀಕತೆಯ ಪ್ರಭಾವದಿಂದಾಗಿ ಶಿಷ್ಟ ಸಂಸ್ಕೃತಿಯ ಬಲೆಗೂ ಬೀಳುವಂಥ ಜನರನ್ನು ಕಾಣು ತ್ತೇವೆ. ಇವರಲ್ಲಿ ಕಂಡುಬರುವಂಥದ್ದು 'ಮಧ್ಯಮ ಸಂಸ್ಕೃತಿ'.

ನಮ್ಮ ಜಾನಪದ ವಿದ್ವಾಂಸರು ಫೋಕ್‌ಲೋರ್ ಪದದ ವ್ಯಾಖ್ಯಾನ ಮಾಡುವಾಗ 'ಲೋರ್' ಎಂಬ ಪದಕ್ಕೆ 'ಸಂಸ್ಕೃತಿ' ಎಂಬ ಅರ್ಥವನ್ನುಕೊಟ್ಟು ವ್ಯಾಖ್ಯಾನಿಸಿದ್ದನ್ನು ನೋಡಿದರೆ 'ಫೋಕ್‌ಕಲ್ಚರ್' ಮತ್ತು 'ಫೋಕ್‌ಲೋರ್'– ಇವೆರಡು ಬೇರೆ ಬೇರೆಯಲ್ಲ ಎಂಬುದು ಖಚಿತವಾಗುತ್ತದೆ. "ನಾಗರೀಕ ಹಾಗೂ ಶಿಷ್ಟ ಸಂಸ್ಕೃತಿಗಳಿಂದ ದೂರ ಸರಿದ ಪರಂಪರಾನುಗತವಾದ ಬೆಳವಣಿಗೆಯನ್ನು ಪಡೆದ ಜನಸಾಮಾನ್ಯರ ವಿಶಿಷ್ಟ ಸಂಸ್ಕೃತಿಯೇ 'ಜಾನಪದ'. ಅವರ ಜೀವನದ ಸಮಸ್ತ ವಿಷಯಗಳೂ ಇದರಲ್ಲಿ ಸಮಾವೇಶಗೊಳ್ಳುತ್ತವೆ ಎಂತಲೇ ಆಧುನಿಕ ಜಾನಪದ ವಿದ್ವಾಂಸರು 'ಜಾನಪದ'ದ ವಿಶಾಲ ಗರ್ಭದಲ್ಲಿ ಜನಪದ ಜೀವನದ ಯಾವ ಒಂದು ಅಂಗವನ್ನೂ ಬಿಡದೆ ಅಭ್ಯಸಿಸುತ್ತಾರೆ". (ಡಾ॥ ಜೀಶಂಪ–ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು).

ಒಂದು ಕಾಲದಲ್ಲಿ ಗಿರಿಜನರು, ಪಂಚಮರು, ಹಿಂದುಳಿದ ಪಂಗಡಗಳು, ಮತ್ತು ಹೆಂಗಸರು—ನಡೆಸುತ್ತಿದ್ದ ಜೀವನವನ್ನು ತುಂಬ ತಾತ್ಸಾರ ಮನೋಭಾವ ನೆಯಿಂದ ನೋಡಿದ್ದುಂಟು. ಇಂಥ ದೃಷ್ಟಿಕೋನದಲ್ಲಿ ದೊಡ್ಡ ದುರಂತವಿದೆ ಎಂಬುದನ್ನು ನಮ್ಮಲ್ಲಿ ಅನೇಕರು ಗಮನಿಸಲಿಲ್ಲ. ವಿದ್ಯೆ ಕಲಿಯಬಾರದು, ವೇದಗಳ ನ್ನು ಬಾಯಲ್ಲಿ ಉಚ್ಚರಿಸಬಾರದು ಇದಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಕಿವಿ ಮತ್ತು ನಾಲಗೆಯನ್ನು ಕತ್ತರಿಸಿಹಾಕುವಂಥ ಶಿಕ್ಷಾವಿಧಾನದ ಕಾಲವೂ ಇತ್ತು. ಇಂಥಾ ಬಿಗಿ ನಿಯಮಗಳನ್ನೂ ಜನ ಅನುಸರಿಸುತ್ತಿದ್ದರೆಂಬುದು ಆಶ್ಚರ್ಯದ ಸಂಗತಿ. ಇಂಥ ಸಂದರ್ಭದಲ್ಲಿ ಈ ಗುಂಪಿನ ಜನರ ಸಂಸ್ಕೃತಿಯೇ ಒಂದು ರೀತಿ

ಯಾಗಿ ಮುಂದುವರಿಯಿತು. ಇವರ ಮೇಲೆ ಶಿಷ್ಟ ಸಂಸ್ಕೃತಿ ಒಂದು ಸಮಾನೆಯ ದಬ್ಬಾಳಿಕೆಯನ್ನು ನಡೆಸುತ್ತಲೇ ಬಂತು. ವರ್ಣವ್ಯವಸ್ಥೆ, ಅಸ್ಪೃಶ್ಯತೆಯನ್ನು ವಿವರಿಸುವ ನಾನಾರೀತಿಯ ಹೇಳಿಕೆಗಳು, ವೇದೋಪನಿಷತ್ತುಗಳು, ಅವುಗಳ ಆಧ್ಯಾತ್ಮ ವಿಚಾರಗಳು, ವಿಷ್ಣುವಿನ ಅವತಾರಗಳು, ಮನು ಮೊದಲಾದವರು ಹೇಳುತ್ತಿದ್ದ ಸಾಮಾಜಿಕ ಮೌಲ್ಯಗಳು—ಮೊದಲಾದುವು ಮಾತ್ರ ಭಾರತೀಯ ಸಂಸ್ಕೃತಿಯ ಹಣೆಪಟ್ಟಿಯಲ್ಲಿ ವಿಜೃಂಭಿಸುತ್ತಿದ್ದವು. ಇವುಗಳಿಂದ ಉಪಯೋಗ ಪಡೆಯುತ್ತಿದ್ದವರು ಮಾತ್ರ ಈ ಸಂಸ್ಕೃತಿಗಳ ಬೆಂಬಲಿಗರಾದರು. ಈ ವರ್ಗದವರು ಅಂದರೆ ಭಾರತೀಯ ಸಂಸ್ಕೃತಿಯ ಪರಿಪಾಲಕರು ಹೇಳಿದ್ದನ್ನು ಕೊಂಚವೂ ಯೋಚಿಸದೆ ಅವುಗಳಿಗೆ ಅಂಟಿಕೊಂಡವರು ಮಾತ್ರ ಶಿಷ್ಟ ಸಂಸ್ಕೃತಿಯ ಆರಾಧಕರಾದರು. ಧರ್ಮ, ದೇವರು, ಪಾಪ, ಪುಣ್ಯ, ಹಣೆಬರಹ—ಮೊದಲಾದುವನ್ನು ಪೂರ್ಣವಾಗಿ ನಂಬಿ ಇಂಥವುಗಳನ್ನು ಪ್ರಶ್ನಿಸುವ ಗೋಜಿಗೇ ಹೋಗಲಿಲ್ಲ. ಜನಪದರು ಶಿಷ್ಟ ಸಂಸ್ಕೃತಿಯ ಇಂಥ ಉದ್ದೇಶಿತ ದಬ್ಬಾಳಿಕೆಗೆ ಒಳಗಾಗಿದ್ದುದಲ್ಲದೆ ಮೂಲತಃ ತಮ್ಮಲ್ಲಿಯೇ ಬೇರುಬಿಟ್ಟಿದ್ದ ಮೂಢನಂಬಿಕೆಗಳಿಂದಲೂ ಜನ ತುಳಿತಕ್ಕೊಳಗಾದರು. ತಮ್ಮ ಮೇಲೆ ನಡೆಯುತ್ತಿರುವ ದೌರ್ಜನ್ಯಗಳಿಗೆ ಸರಿಯಾದ ಕಾರಣಗಳನ್ನು ಹುಡುಕದೆ, ತಿಳಿವಳಿಕೆ ಮೂಡಿಸಿಕೊಳ್ಳದೆ ತೆಪ್ಪಗಿರುವವರ ಸಂಖ್ಯೆಯೇ ಜಾಸ್ತಿ. ಹಾಗಾಗಿ ಒಂದು ಪದ್ಧತಿ ರೂಢಿಯಲ್ಲಿದೆ ಎಂದರೆ ಅದು ನಮ್ಮ ಪೂರ್ವಿಕರಿಂದ ಬಂದಿದ್ದೆಂದು ಹೇಳಿ ಸುಮ್ಮನಾಗಿಬಿಡುತ್ತಾರೆ, ತಲೆ ಕೆಡಿಸಿಕೊಳ್ಳುವ ಗೋಜಿಗೇ ಹೋಗಲಿಲ್ಲ. ಕೆರೆ, ಕಟ್ಟೆ, ಬಾವಿ–ಕೋಡಿ, ಅಗಸೆ–ಕೋಟೆಗಳಿಗೆ ಬಲಿಯಾದವರುಂಟು. (ಕೆಂಪೇಗೌಡನ ಸೊಸೆ ಬೆಂಗಳೂರು ಕೋಟೆಗೆ ಬಲಿಯಾದ ಕತೆಯನ್ನು ಜ್ಞಾಪಿಸಿಕೊಳ್ಳಬಹುದು) ವೀರಗಲ್ಲು–ಮಾಸ್ತಿಗಲ್ಲುಗಳಿಗೆ ಕತೆಯಾದವರ ಸಂಖ್ಯೆ ಕಡಿಮೆಯದಲ್ಲ. ಸತ್ತ ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು ಬೆಂಕಿಗೆ ಬಿದ್ದವರು ಎಷ್ಟೋ ಮಂದಿ. ಇವರೆಲ್ಲರ ಬಗೆಗೆ ಹಾಡು ಕತೆಗಳಿವೆ. ಗಂಡಂದಿರು ಸತ್ತ ಮೇಲೆ ಬೆಂಕಿಗೆ ಬೀಳದೆ ತಪ್ಪಿಸಿಕೊಂಡು ಓಡಿ ಹೋಗುತ್ತಿದ್ದ ಸಂದರ್ಭಗಳೂ ಇದ್ದುವು. ಈ ರೀತಿ ಪಲಾಯನ ಸೂತ್ರ ಹಿಡಿಯುತ್ತಿದ್ದುದರಿಂದಲೋ ಏನೋ ಪ್ರತಿಷ್ಠಿತ ವ್ಯಕ್ತಿಗಳು ಊರಿನ ಬಾಗಿಲುಗಳನ್ನು ಮುಚ್ಚಿಸಿ ಬೆಂಕಿಗೆ ನೂಕುತ್ತಿದ್ದುದರ ಬಗೆಗೆ ಕಥನಗೀತೆಗಳಿವೆ. ಇದರಿಂದಲೂ ತಪ್ಪಿಸಿಕೊಂಡು ಸಮಾಜದಲ್ಲಿ ಬದುಕುವುದು ಇಷ್ಟವಾದರೆ ಆ ಸಮಾಜದ ಹೀನದೃಷ್ಟಿಗೆ ಗುರಿಯಾಗುತ್ತಿದ್ದ ಸಂದರ್ಭಗಳು ಅಧಿಕವಾಗಿದ್ದುವು. ಕೃಷ್ಣಮೂರ್ತಿ ಹಾನೂರರ 'ಕತ್ತಾಲ ದಾರಿ ದೂರ' ಕೃತಿಯಲ್ಲಿನ ಒಂದು ಘಟನೆ ಈ ಮಾತನ್ನು ಸಮರ್ಥಿಸುತ್ತದೆ: "ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು

ಯರಬಳ್ಳಿ ಗ್ರಾಮದ ಬಳಿ ಮಹಾಸತಿ ವೀರತಿಮ್ಮವ್ವನ ಕೊಂಡವಿದೆ. ಅದರ ಬಳಿಗೆ ಮತ್ತೊಂದು ಚಿಕ್ಕ ಜಗುಲಿ ಕೊಂಡವಿದೆ. ಅದು ತಪ್ಪಿಸಿಕೊಂಡು ಓಡುತ್ತಿದ್ದವಳನ್ನು ಹಿಡಿದು ತಂದು ಬೆಂಕಿಗೆ ತಳ್ಳಿ ನಂತರ ಕಟ್ಟಿದ್ದು, ಆಕೆಗೆ ಪೂಜೆಯಿಲ್ಲ ತಿಮ್ಮವ್ವನಿಗೆ ಮಾತ್ರ ಪೂಜೆ" ಇತ್ಯಾದಿಯಾಗಿ ಅವರು ದಾಖಲಿಸಿದ್ದಾರೆ. ಹೀಗಾಗಿ ಗಂಡ ಸತ್ತನಂತರ ಬದುಕಲು ಇಷ್ಟಪಟ್ಟರೆ ಸಮಾಜದ ಮನ್ನಣೆ ಪಡೆಯುತ್ತಿರಲಿಲ್ಲವೆಂದೂ ಗಂಡನನ್ನು ಕಳೆದುಕೊಂಡವರೆಲ್ಲ ಕೆಂಡಕೊಂಡವಾಗಿ ಜನರ ಗೌರವಕ್ಕೆ ಪಾತ್ರರಾಗುತ್ತಿದ್ದರೆಂದೂ ತಿಳಿದುಬರುತ್ತದೆ. ವೀರತಿಮ್ಮವ್ವ, ನಾಗವ್ವ, ಕಾಟವ್ವ, ವಲ್ಲಣದೇವಿ ಇವರೆಲ್ಲ ಗಂಡ ಸತ್ತಮೇಲೆ ಕೆಂಡವಾದ ಮಹಾಸತಿಯರೇ. ಹೀಗಾಗಿ ನೀರು ಮತ್ತು ಬೆಂಕಿ ಇವೆರಡು ಹೆಣ್ಣಿನ ಬದುಕಿನಲ್ಲಿ ಸಾವು ತರುವ ಪ್ರಸಂಗಗಳಾಗಿದ್ದವು. ಇಷ್ಟಾದರೂ ಯಾವ ಅಪರಾಧಗಳಿಗೆ ಇಂಥ ಅಮಾನುಷ ಶಿಕ್ಷೆಗಳು ಎಂಬುದನ್ನು ಆಲೋಚಿಸದ ಜನರ ಬದುಕನ್ನು ನಾವು ಜನಪದ ಕಾವ್ಯ-ಕಥೆಗಳಲ್ಲಿ ಕಾಣುತ್ತೇವೆ. ಇವರ ಬದುಕಿನಲ್ಲಿ ಘಟಿಸುವ ಇಂಥ ಸಣ್ಣಪುಟ್ಟ ಘಟನೆ-ಸನ್ನಿವೇಶಗಳನ್ನು ಗುರುತಿಸುವುದರ ಮೂಲಕ ಸಾಮಾನ್ಯ ಜನತೆಯ ಗ್ರಾಮೀಣ ಸಂಸ್ಕೃತಿಯನ್ನು ಅಧ್ಯಯನ ಮಾಡಲು ತೊಡಗದೆ ಭವ್ಯ ಸಂಸ್ಕೃತಿಯನ್ನು ನೆರಳನ್ನು ಗುರ್ತಿಸಲು ಹೊರಟವರೇ ನಮ್ಮಲ್ಲಿ ಅನೇಕ ಮಂದಿ. ಎಲ್ಲ ಜಾತಿಗಳಲ್ಲಿಯೂ ಹೆಣ್ಣು ಋತುಮವಾದಾಗ ಮಾಡುವ ಆಚಾರಗಳು, ಮದುವೆ ಶಾಸ್ತ್ರಗಳು, ಚೊಚ್ಚಲು ಬಸುರಿಗೆ ಮಾಡುವ ಸೀಮಂತ ಶಾಸ್ತ್ರ, ಮಗುವಿಗೆ ನಾಮಕರಣ ಶಾಸ್ತ್ರ-ಇತ್ಯಾದಿಗಳು ಆಯಾ ವಯಸ್ಸಿನ ಅಂತರದಲ್ಲಿ ಮಾಡುವ ವಿವಿಧ ಶಾಸ್ತ್ರ ಸಂಪ್ರದಾಯಗಳು. ಒಂದೊಂದು ಜಾತಿಯಲ್ಲಿ ಒಂದೊಂದು ತೆರನಾಗಿವೆ. ವ್ಯಕ್ತಿಯ ಬದುಕಿನಲ್ಲಿ ಕಂಡು ಬರುವ ಈ ಬೆಳವಣಿಗೆಗಳು ಸಾಂಸ್ಕೃತಿಕ ಅಂಶಗಳನ್ನು ಸಮರ್ಥವಾಗಿ ಸೂಚಿಸುತ್ತವೆ. ಅಲ್ಲದೆ ಹೆಣ್ಣು ಬೆತ್ತಲೆಯಾಗಿ ಹರಕೆ ಸಲ್ಲಿಸುವುದು, ಬಂಜೆಯರನ್ನು ದೇವರ ಮುಂದೆ ಅಡ್ಡಲಾಕುವುದು, ಉರುಳುಸೇವೆ, ಪತ್ತಿನಸೇವೆ, ಬಾಯಿಬೀಗ, ಸಿಡಿ, ಆರಾಧನೆಯ ನೆಪದಲ್ಲಿ ಮಕ್ಕಳಿಲ್ಲದವರು ಲೈಂಗಿಕ ಚಿತ್ರಗಳನ್ನು ಬಿಡಿಸಿರುವ ರಥದ ಕೆಳಗಡೆ ಗರ್ಭದಾನ ಮಾಡಿಸಿಕೊಳ್ಳುವುದು-ಇತ್ಯಾದಿ ಅಮಾನವೀಯ ಪದ್ಧತಿಗಳು, ಮಾತೃಪೂಜೆ, ಫಲಸಮೃದ್ಧಿ ದೇವತೆಯ ಆರಾಧನೆ, ತಿಂಗಳು ಮಾವನ ಪೂಜೆ, ಗುರ್ಚಿ-ಗುಳ್ಳವರ ಪೂಜೆ, ಕೊಂತಿ-ಶೀಗೀಗೌರಿ ಪೂಜೆ-ಮೊದಲಾದ ಆಚರಣೆ ಪದ್ಧತಿಗಳೂ ರೂಢಿಯಲ್ಲಿವೆ. ಜನರ ಜೀವನದ ಪೂರ್ಣಕಾಲದಲ್ಲಿ ಶುಭವಾಗಲಿ ಎಂಬ ಮನೋಧರ್ಮವೇ ಈ ಎಲ್ಲ ಆರಾಧನೆಗಳ ಹಿನ್ನೆಲೆಯಾಗಿದೆ. ಫಲಸಮೃದ್ಧಿ ದೇವತೆಯಾದ ಜೋಕುಮಾರನ ಆರಾಧನೆ ಉತ್ತರ ಕರ್ನಾಟಕದ ಓಣಿ ಓಣಿಗಳಲ್ಲಿ ಈಗಲೂ ನಡೆಯುತ್ತದೆ. ಇದು ತುಂಬ ಪ್ರಾಚೀನವಾದಂಥ

ಸಮೃದ್ಧಿ ದೇವತೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಹಸಿ ಮಣ್ಣಿನಿಂದ ಉದ್ದ ಶಿಶ್ನಮಾಡಿ ತುದಿಯಲ್ಲಿ ಬೆಣ್ಣೆ ಇಲ್ಲವೆ ಸುಣ್ಣ ಅಂಟಿಸುತ್ತಾರೆ. ಅದರ ಆರಂಭದಲ್ಲಿ ಹಜಾಮರ ಶಾಪಿನಿಂದ ತಂದ ಕೂದಲು ಅಂಟಿಸುವರು. ಜೋಕುಮಾರನಿಗೆ ಕೊಡುವ ನೈವೇದ್ಯ ಉಪ್ಪುಹುಳಿಖಾರಗಳು. ಬೈಗಳ ಅವನಿಗೆ ಮಂಗಳಾರತಿ. ಬಂಜೆಯರು ಇದರ ಮೇಲೆ ಕುಳಿತು ಹೋದರೆ ಮಕ್ಕಳಾಗುತ್ತವೆಂದು ಈಗಲೂ ನಂಬುತ್ತಾರೆ. ಕೆಲವು ಕಡೆಗಳಲ್ಲಿ ಪಡುವಲಕಾಯನ್ನೇ ಜೋಕುಮಾರನೆಂದು ಪೂಜಿಸಿ ಅವನ ಹುಣ್ಣಿಮೆ ದಿನ ಅದರ ಪಲ್ಯಮಾಡಿ ಬಂಜೆಯರ ಗಂಡಂದಿರಿಗೆ ತಿನ್ನಿಸುವುದುಂಟು. ಪ್ರಪಂಚದಾದ್ಯಂತ ಇಂಥ ಕಥೆ–ದೇವತೆಗಳಿವೆ.

ಜೋಕುಮಾರನಿಗೆ ತೊಂದರೆ ಕೊಟ್ಟರೆ ಆತನು ಜನರ ಪರವಾಗಿ ಹೋಗಿ ಶಿವನ ಬಳಿ ದುಡಿಯುವವರ ಕಷ್ಟ ನಿರೂಪಿಸುತ್ತಾನೆ ಎಂಬ ನಂಬಿಕೆ ಇದೆ. ಇದರ ನಿಜವಾದ ಬಣ್ಣ ಏನೇ ಇರಲಿ ಒಂದಂತೂ ಸತ್ಯ. ನಮ್ಮ ತಾಪತ್ರಯಗಳು ಬಗೆಹರಿಯಬೇಕೆಂಬುದು ದುಡಿಯುವ ವರ್ಗದ ಪ್ರಧಾನ ಆಶಯ. ಇನ್ನೊಂದು ಪರಿಗಣಿಸಬೇಕಾದ ಅಂಶವೆಂದರೆ ಈ ದೇವರು ಸಂಪೂರ್ಣವಾಗಿ ಆಸ್ತಿವಂತರ–ಆಳುವ ವರ್ಗದ ಪರನಿಂತ ದೇವರು. ಆಳುವವರ ಕೆಟ್ಟ ನಡವಳಿಕೆಗಳಂತೆಯೇ ಈ ದೇವರು ಅತ್ಯಾಚಾರಮಾಡಲು ತೊಡಗುತ್ತದೆ. ಇದನ್ನು ಸಹಿಸದ ಜನ ಪ್ರತಿಭಟಿಸಿದರು. ಪ್ರತಿಭಟನೆಯನ್ನು ಕುರಿತು ಮಾತಾಡುವಾಗ ಕನ್ನಡ ಜಾನಪದದಲ್ಲಿ ಈ ಧೋರಣೆ ತುಂಬ ಅಪರೂಪವಾಗಿ ಕಾಣಿಸಿಕೊಳ್ಳುತ್ತದೆ. ಅದರಲ್ಲೂ ಹೋರಾಟವನ್ನು ಪ್ರತಿಪಾದಿಸುವಂಥ ಕಿತ್ತೂರು ಚೆನ್ನಮ್ಮನ ಲಾವಣಿ, ನರಗುಂದದ ಬಂಡಾಯ ಲಾವಣಿ, ಸಂಗೊಳ್ಳಿ ರಾಯಣ್ಣನ ಲಾವಣಿ–ಮೊದಲಾದ ಲಾವಣಿಗಳು ಇದ್ದಾಗ್ಯೂ ಜೋಕುಮಾರನ ಅವನತಿ ಇಡೀ ಜನಪದ ಸಾಹಿತ್ಯದಲ್ಲಿ ತುಂಬ ಅಪರೂಪವಾದುದು. ಕಾರಣ ದೈವದ ಅಸ್ತಿತ್ವದ ವಿರುದ್ಧ ಪ್ರತಿಭಟಿಸಿ ನಿಂತದ್ದರಿಂದ ಶ್ರೀಮಂತ ವರ್ಗ ಎಲ್ಲ ರೀತಿಯಲ್ಲೂ ಧರ್ಮ, ಶಾಸ್ತ್ರ, ದೈವ ಮೊದಲಾದುವು ತನಗೆ ಅನುಕೂಲಿಸುವಂತೆ ಹುಟ್ಟಿಸಿಕೊಂಡಿರುವ ದುರಂತ ಸಂದರ್ಭದಲ್ಲಿ ಈ ಜೋಕುಮಾರನ ಆರಾಧನೆಯಲ್ಲಿ ವ್ಯಕ್ತವಾಗುವ ಆಶಯ ಮುಖ್ಯವೆನಿಸುತ್ತದೆ. ದೇವರು ಮತ್ತು ಆಳ್ವಿಕೆಯ ದರ್ಪದ ವಿರುದ್ಧ ನಡೆದಿರುವ ಇದು ಉಳಿದೆಲ್ಲ 'ರಾಜಕೀಯ ಕ್ರಾಂತಿಗೀತೆಗಳಿಗಿಂತ' ಮುಖ್ಯವೆನಿಸುತ್ತದೆ.

ಶಿಷ್ಟ ಸಾಹಿತ್ಯದಲ್ಲಿ ಸಾಮಾನ್ಯ ಮಾನವರನ್ನು ದೇವರೆಂದು ಭಾವಿಸಿ ಅಲೌಕಿಕದ ವಾತಾವರಣ ಉಂಟಾಗಿರುವುದನ್ನು ಕಂಡರೆ ಇದರ ಯಾವುದೇ ಪ್ರಭಾವಕ್ಕೆ ಒಳಗಾಗಿರದ ಜನಪದ ಸಾಹಿತ್ಯದಲ್ಲಿ ಪುರಾಣ ಪಾತ್ರಗಳು ತನ್ನದೇ ಆದ ರೀತಿಯಲ್ಲಿ

ಬೆಳವಣಿಗೆ ಪಡೆದಿರುವುದು ಜನಪದ ಸಂಸ್ಕೃತಿಯ ಹೆಗ್ಗಳಿಕೆಯಾಗಿದೆ. ಪುರಾಣ ಪಾತ್ರಗಳನ್ನು ತಮ್ಮ ಬದುಕಿಗೆ ಸಮೀಪವಾಗುವಂತೆ ಅಳವಡಿಸಿಕೊಳ್ಳುವ ಕಲೆ ಜನಪದರಿಗೆ ಮಾತ್ರ ಸಿದ್ಧಿಸಿದೆ. ಈ ಆವರಣದಲ್ಲಿ ಬರುವ ಪಾಂಡುಕುಮಾರರು ಕ್ಷತ್ರಿಯರಾಗಿ ಕಂಡು ಬರದೆ ರೈತನ ಮಕ್ಕಳಾಗಿ ವಿಜೃಂಭಿಸಿದ್ದಾರೆ. ಶಿವ ಪಾರ್ವತಿ, ರಾಮ ಸೀತೆ, ಕೃಷ್ಣ ರುಕ್ಮಿಣಿಯರೂ ಅಲೌಕಿಕದ ಆವರಣದಲ್ಲಿನ ಅಜ್ಞಾತ ದೇವತೆಗಳಂತೆ ಚಿತ್ರಿತವಾಗದೆ ನೋವು ನಲಿವು, ಸೋಲು ಗೆಲುವು-ಮೊದಲಾದ ಮಾನವ ಸಹಜ ಗುಣವುಳ್ಳ ಮಣ್ಣಿನ ಮಕ್ಕಳಾಗಿ ಕಂಡುಬರುತ್ತಾರೆ. ಸ್ನಾನ ಮಾಡುತ್ತಿರುವ ದೇವೀರಿಯನ್ನು ಕದ್ದು ನೋಡಲು ನಂಜನಗೂಡಿನ ಶಿವನು ಹೆಂಡತಿಯ ಪಕದಲ್ಲಿ ಮಲಗಿದ್ದವನು ಕಳ್ಳನಂತೆ ತಪ್ಪಿಸಿಕೊಂಡು ಬರುತ್ತಾನೆ. 'ಗಂಗೆ ಗೌರಿ ಜಗಳ' ಕಥನ ಗೀತೆಯಲ್ಲಿ ಹೆಂಡತಿಗೆ ಹೆದರುವಂಥ ಶಿವ ಒಬ್ಬ ರೈತನಾಗಿಯೂ, ಗಂಗೆ ಗೌರಿಯರು ಸಣ್ಣ ಪುಟ್ಟ ವಿಷಯಗಳಿಗೆ ಜಡೆ ಹಿಡಿದುಕೊಂಡು ಅಶ್ಲೀಲವಾಗಿ ಬೈಯ್ದಾಡುವ ಸಾಮಾನ್ಯ ಹೆಂಗಸರಂತೆಯೂ ಕಂಡುಬರುವ ಚಿತ್ರಣವಿದೆ. ಶಿವನ ತೋಟದಲ್ಲಿ ಬೆಳೆದ ಮಲ್ಲಿಗೆ ಹೂಗಳನ್ನು ಬಿಡಿಸಿತಂದ ಗೌರಿ ಉತ್ತಮವಾದುವುಗಳನ್ನು ತಾನಿಟ್ಟುಕೊಂಡು ಬಾಡಿದವುಗಳನ್ನು ಗಂಗೆಗೆ ಕಳಿಸುತ್ತಾಳೆ. ಕೋಪಿಸಿಕೊಂಡ ಗಂಗೆ ಹೂಗಳನ್ನು ಬೀದಿಗೆಸೆಯುತ್ತಾಳೆ. ಆವೇಶಭರಿತಳಾಗಿದ್ದ ಗೌರಿ ಇದಕ್ಕೆ ಕಾರಣ ಕೇಳಿದಾಗ ಜಗಳ ಆರಂಭವಾಗುತ್ತದೆ. ಜಡೆ ಹಿಡಿದು ಜಗ್ಗಾಡುವುದರ ಜೊತೆಗೆ ಗಂಗೆಯನ್ನು ಕುರಿತು ಗೌರಿ :

**ನೀನು ನೂರುಷರಲ್ಲೆ ನಿಮ್ಮಪ್ಪದೀರು**
**ನೀನು ನೂರುವರಲ್ಲೆ ನಿಮ್ಮಣ್ಣದೀರು**
**ತೆಪ್ಪ ಹತ್ತುವರಲ್ಲೆ ನಿಮ್ಮಪ್ಪದೀರು-ಎಂದು**

ಛೇಡಿಸುತ್ತಾಳೆ. ಈ ಘಟನೆ ನಡೆದ ನಂತರ ಗೌರಿ ಮುಟ್ಟಾಗುತ್ತಾಳೆ. ಸೂತಕವನ್ನು ಕಳೆದುಕೊಳ್ಳಲು ನೀರುಬೇಕೆಂದು ಮಗನ ಮೂಲಕ ಹೇಳಿಕಳಿಸುತ್ತಾಳೆ. ನಕಾರಾತ್ಮಕ ಉತ್ತರ ಬಂದಾಗ ತಾನೇ ಬಂದು ಕೈಯೊಡ್ಡುತ್ತಾಳೆ. ಆಗ ಗಂಗೆ

**ನೀವು ಉತ್ತಾಮರಲ್ಲೆ ನಾವು ಬೆಸ್ತಾರು**
**ಬೆಸ್ತಾರ ಮನೆಗೆ ನೀ ಬರಬಹುದೆ ಗರತಿ**
**ಬೆಸ್ತಾರ ಮನೆ ನೀರು ಬೇಡೋಗೆ ನಿನಗೆ—**

ಹೀಗೆ ಪ್ರತ್ಯುತ್ತರ ನೀಡುತ್ತಾಳೆ. ಗೌರಿ ಕೊನೆಗೆ 'ನನ್ನ ಭಾಗದ ಶಿವನನ್ನೇ ನಿನಗೆ ಒಪ್ಪಿಸುವೆ' ಎಂದು ಮಾತು ಕೊಟ್ಟು ನೀರನ್ನು ಪಡೆಯುತ್ತಾಳೆ. ನಂತರ ಮಾತಿಗೆ ಋದ್ಧವಾಗಿ ನಡೆದುಕೊಂಡಾಗ ಮತ್ತೆ ಜಟಾಪಟಿ ಜಗಳ ಆರಂಭವಾಗುತ್ತದೆ.

ಆಗ ಶಿವ ಬಂದು ಬಿಡಿಸುತ್ತಾನೆ. ಇದು ಗಂಗೆ ಗೌರಿ ಜಗಳದ ಕಥೆ. ಇಲ್ಲಿ ಮುಟ್ಟಾದಾಗ ಸಾಮಾನ್ಯ ಹೆಂಗಸರಂತೆ ಸೂತಕವನ್ನು ಕಳೆದುಕೊಳ್ಳಲು ನೀರಿಗಾಗಿ ತವಕಿಸುವುದು, ಈರ್ಷೆಯನ್ನು ವ್ಯಕ್ತಪಡಿಸುವುದು, ಸವತಿಮತ್ಸರದಿಂದ ಜಗಳಾಡು ವುದು–ಇವೆಲ್ಲ ಸಾಮಾನ್ಯ ಹೆಂಗಸರ ಬದುಕಿನ ರೀತಿ ನೀತಿಗಳಾಗಿ ಕಂಗೊಳಿಸಿವೆ. ಅಲ್ಲದೆ ವರ್ಗಪ್ರಜ್ಞೆ–ಶೂದ್ರ ಪ್ರಜ್ಞೆಯೂ–ಕಂಡು ಬರುತ್ತದೆ. ಇಂಥ ಸಲಿಗೆಯ ವಾತಾವರಣ ಶಿಷ್ಟ ಸಾಹಿತ್ಯದಲ್ಲಿ ಕಂಡುಬರುವುದು ಅಪರೂಪ. ಇಂಥ ಅಂಶ ಗಳಿಂದಲೇ ಜನಪದ ಸಂಸ್ಕೃತಿ ಶಿಷ್ಟ ಸಂಸ್ಕೃತಿಗಿಂತ ಪ್ರತ್ಯೇಕವಾಗಿ ನಿಲ್ಲುತ್ತದೆ. ಅಲ್ಲದೆ ಶಿಷ್ಟ ಸಂಸ್ಕೃತಿಯಲ್ಲಿ ಇಹಲೋಕದ ಸಾಧನೆಗಿಂತ ಪರಲೋಕದ ಸೌಖ್ಯಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗಿದೆ. ಆದರೆ ಜನಪದ ಸಂಸ್ಕೃತಿಯಲ್ಲಿ ಸಂಸಾರ ಜೀವನದಲ್ಲಿ ಸುಖ ಶಾಂತಿ, ತೃಪ್ತಿ, ಹೊಂದಾಣಿಕೆ, ಸೌಂದರ್ಯ–ಮೊದಲಾದುವುಗಳಿಗೆ ಪ್ರಾತಿನಿಧ್ಯವಿರುವುದನ್ನು ಕಾಣುತ್ತೇವೆ. ಜನಪದರ ಆಸೆ ಆಕಾಂಕ್ಷೆಗಳೂ ತುಂಬ ಸರಳವಾದುವುಗಳು. ಬದುಕನ್ನು ನಿರಾಯಾಸವಾಗಿ ನಡೆಸಿಕೊಂಡು ಹೋಗಲು ಅವರು ಕಂಡುಕೊಂಡ ಮಾರ್ಗವೇ ಇದು. ಹಾಗಾಗಿ ಇವರ ಬದುಕಿನ ಅಭಿವ್ಯಕ್ತಿ ಯಾಗಿ ಮೂಡಿಬಂದಿರುವ ಹಾಡುಗಳಲ್ಲಿ ವ್ಯಕ್ತವಾಗುವ ಅವರ ಮನೋಧರ್ಮ ಗೊಂದಲಮಯವಾದ್ದಲ್ಲ. ಕುಟುಂಬದ ಆಚಾರ ವಿಚಾರಗಳು, ಸುಖ ಸಂತೋಷ, ಗಂಡ ಹೆಂಡಿರ ಜಗಳ–ಇತ್ಯಾದಿ ವಿಷಯಗಳು ಜನಪದ ಸಾಹಿತ್ಯದಲ್ಲಿ ಸೊಗಸಾಗಿ ಮೂಡಿವೆ. ಸಾಮಾಜಿಕ ಜೀವನದ ಒಂದು ಮಗ್ಗುಲನ್ನೇ ಪರಿಚಯಿಸುವಂಥ ತ್ರಿಪದಿಗಳಿವೆ. ಸ್ತ್ರೀ ಮನೋಧರ್ಮವನ್ನು ಗುರುತಿಸುವಂಥ ಗರತಿಯ ಹಾಡು ಗಳಿಗೇನೂ ಕೊರತೆಯಿಲ್ಲ.

**ತೊಟ್ಟಿಲ ಹೊತ್ಕೊಂಡು ತವರ್ಬಣ್ಣ ಉಟಗೊಂಡು**
**ಅಪ್ಪ ಕೊಟ್ಟೆಮ್ಮೆ ಹೊಡಕೊಂಡು! ತವರೂರ**
**ತಿಟ್ಹತ್ತಿ ತಿರುಗಿ ನೋಡ್ಯಾಳ**

ಹೆಣ್ಣಿನ ಅಂತರಾಳದಲ್ಲಿ ಮಿಡಿಯುವ ಭಾವನೆಗಳು ಮೂರೇ ಸಾಲಿನಲ್ಲಿ ವ್ಯಕ್ತ ವಾಗಿವೆ. 'ಕೊಟ್ಟು ಕದಿಯಬೇಡ ಮಾಡಿ ಹಂಗಿಸಬೇಡ' ಎಂಬ ನೀತಿಗಳೂ ಜನಪದರ ಬದುಕಿನಲ್ಲಿ ಕಂಗೊಳಿಸಿವೆ. ಇವು ಮಾನವನಲ್ಲಿರಬೇಕಾದ ಪ್ರಧಾನ ಗುಣಗಳು. ಇವುಗಳಿಂದ ಆತ ಶ್ರೇಯಸ್ಸು ಪಡೆಯುತ್ತಾನೆ ಎಂಬುದು ಜನಪದರ ಆಶಯ. ಅಂತೆಯೇ ಜನಪದ ಗೀತೆಗಳಲ್ಲಿ ಧಾರ್ಮಿಕ ವಿಚಾರಗಳ ಜೊತೆಗೆ ಹಾಸ್ಯ, ಸರಸ, ಪ್ರೇಮಕಾಮ, ಚೇಷ್ಟೆ ಚಲ್ಲಾಟಗಳು ಹಾಗೂ ಮಳೆ, ದೇವರು, ಪ್ರಕೃತಿ, ಮದುವೆ, ಆಚಾರ, ಸಂಪ್ರದಾಯಗಳನ್ನು ಕುರಿತಂತೆ ಹೇಳುವ ಹಾಡುಗಳೂ

ಪ್ರಪಂಚದ ಜಾನಪದಕ್ಕೆ ವಿಶಿಷ್ಟವಾಗಿರುವಂತೆ ನಮ್ಮ ಜನರ ಸಂಸ್ಕೃತಿಯನ್ನು ಸಮರ್ಥವಾಗಿ ಪ್ರತಿಬಿಂಬಿಸುತ್ತವೆ. ಪುರುಷರ ದಬ್ಬಾಳಿಕೆಗೆ ಸಿಕ್ಕಿದ ಹೆಣ್ಣು ಅನುಭವಿಸಿದ ಪದರು ಪದರುಗಳು ಗುಣಸಾಗರಿ, ಉತ್ತರದೇವಿ, ಕಾಡುಸಿದ್ದಮ್ಮ, ಹುಳಿಯಾರು ಕೆಂಚಮ್ಮ, ಚಿಕ್ಕೋಳು ಹಿರಿದಿಮ್ಮಪ್ಪ-ಮೊದಲಾದ ಕಥನ ಗೀತೆಗಳಲ್ಲಿ ಇನ್ನೂ ಹೆಚ್ಚಾಗಿ ಸಿಗುತ್ತದೆ. ಸ್ತ್ರೀಲೋಕದ ದುಃಖದ ಉತ್ತುಂಗವನ್ನು ಈ ಕಥನಗೀತೆಗಳು ಎಳೆಎಳೆಯಾಗಿ ಬಿಡಿಸುತ್ತವೆ.

ಜನಪದರು ದೇವರ ಬಗ್ಗೆ ಅಚಲವಾದ ಭಕ್ತಿಯುಳ್ಳವರು. ನಮ್ಮಿಂದಾಗುವ ಅಪರಾಧಗಳಿಗೆಲ್ಲ ಪೂರ್ವಜನ್ಮದ ಪಾಪವೇ ಕಾರಣ ಎಂದು ನಂಬಿದವರು. ತಮ್ಮ ಬದುಕಿಗೆ ಪೆಟ್ಟು ಬಿದ್ದರೂ ಪ್ರತಿಭಟಿಸಲಾರದ ಅಸಹಾಯಕ ಪ್ರವೃತ್ತಿಯುಳ್ಳವರು. ವ್ಯಕ್ತಿಯ ಇಷ್ಟಾನಿಷ್ಟಗಳಿಗಿಂತ ಸಮಷ್ಟಿಯ ಮೌಲ್ಯಗಳಿಗೆ ಬೆಲೆ ಕೊಟ್ಟವರು. ಮೂಢನಂಬಿಕೆಯ ತಳಹದಿಯ ಮೇಲೆ ರೂಪುಗೊಂಡಿರುವ 'ಕೆರೆಗೆ ಹಾರ' ಅನ್ನುವಂಥ ಲಾವಣಿ ನನ್ನ ಈ ಮಾತಿಗೆ ನಿದರ್ಶನ. ಇಲ್ಲಿ ಭಾಗೀರಥಿ, ಈಕೆಯ ಗಂಡ ಮಾದೇವರಾಯರ ವೈಯಕ್ತಿಕ ನೋವಿಗಿಂಥ ಸಮಷ್ಠಿಯ ಒಳಿತಿನತ್ತ ಹೆಚ್ಚು ಗಮನ ಕೊಡಲಾಗಿದೆ. ಆದರೆ ಇದೇ ಆಶಯದ 'ಒಡೆರ್ರ ಬೋಯಿ' ಕಥನ ಗೀತೆಯಲ್ಲಿ ಕೆರೆಗೆ ಬಲಿಯಾಗುವ ಹಿರಿಸೊಸೆ ತನ್ನ ತಂದೆ ತಾಯಿಗಳ ಬಳಿ ಹೋಗಿ "ನಮ್ಮ ಮಾವ ಒಡ್ಡಿವಾಗ ಅವರು ಹೊಸಕೆರೆ ಕಟ್ಟಿಸವ್ವೆ ಅದಕ್ಕೆ ರಾವನೆ ಕೊಡ್ತಾರೆ" ಎಂದು ಹೇಳುತ್ತಾಳೆ. ಕೊನೆಗೆ ಮಾವನಿಂದಲೇ ಆಕೆ ಕೆರೆಯ ಪಾಲಾಗುತ್ತಾಳೆ. ಗಿರಡ್ಡಿಯವರು ಹೇಳುವಂತೆ, ಇಲ್ಲಿ ವ್ಯಕ್ತವಾಗುವಂಥ ಪ್ರತಿಭಟನೆ ಮಾವನ ದಬ್ಬಾಳಿಕೆಯ ವಿರುದ್ಧವಾದುದೇ ಹೊರತು ಕೆರೆಗೆ ಹಾರ ಲಾವಣಿಯಲ್ಲಿ ಕಂಡುಬರುವಂಥ ಮೌಲ್ಯಗಳ ವಿರುದ್ಧವಲ್ಲ. ಕೇವಲ ಒಬ್ಬ ವ್ಯಕ್ತಿಯ ವಿರುದ್ಧವಾದುದು.

ವಿಶಾಲವಾದ ಗದ್ಯ ನಿರೂಪಣೆಯುಳ್ಳ ಜನಪದ ಕಥೆಗಳೂ ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ಮುಖ್ಯವಾದವು. ಪ್ರಾಚೀನ ಸಂಸ್ಕೃತಿಯ ಸಾಮಾಜಿಕ ವಿಚಾರಗಳು, ಅಂಧ ಶ್ರದ್ಧೆ, ಜಾತಿ ಪದ್ಧತಿ, ಶಿಕ್ಷಾಪದ್ಧತಿ ಗ್ರಾಮಗಳ ಆಡಳಿತ ವ್ಯವಸ್ಥೆಯ ಅನೇಕ ವಿವರಗಳು ಪ್ರತಿಬಿಂಬಿಸುತ್ತವೆ. ಕಥೆಗಳ ನಾಯಕ ತೀರಾ ಸಾಮಾನ್ಯ ವ್ಯಕ್ತಿಯಾಗಿದ್ದು ಕೀಲು ಕುದುರೆಯ ಮೇಲೇರಿ ಮೂರು ಲೋಕಗಳಲ್ಲಿ ಸಂಚರಿಸಿ ಅಪೂರ್ವ ಸುಂದರಿಯರನ್ನು ಪಡೆದು ವಿಹರಿಸುವಂಥ ವಾತಾವರಣವೂ ಇದೆ. ಅಸ್ಪೃಶ್ಯತೆ, ಜಾತಿಪದ್ಧತಿ, ಮೂಢನಂಬಿಕೆ ಮೊದಲಾದ ಅಂಶಗಳೂ ಕಂಡು ಬರುತ್ತವೆ. ಇವುಗಳ ಮೂಲಕವೂ ಜನಪದರ ಮನೋಧರ್ಮವನ್ನು ಗುರ್ತಿಸಲು ಸಹಾಯವಾಗುತ್ತದೆ. "ಜನಪದ ಕಥೆಗಳನ್ನು ಸೃಷ್ಟಿಸುವ ಸಂದರ್ಭದಲ್ಲಿ ದುರ್ಬಲರಿಗೆ, ಕಿರಿಯರಿಗೆ, ಕುಂಟ ಕುರುಡ ಹೆಳವರಿಗೆ, ದಿಕ್ಕಿಲ್ಲದವರಿಗೆ ಹೆಚ್ಚು ಒತ್ತು ಕೊಡಲಾಗಿದೆ, ಇಂತಹ ವ್ಯಕ್ತಿಗಳಿಗೆ ಹಾಯ ಮಾಡಲು ಅತಿಮಾನುಷ

ಶಕ್ತಿಗಳು ಬರುತ್ತವೆ. ಇದನ್ನೆಲ್ಲ ನೋಡಿದರೆ ಆಳುವ ವರ್ಗಕ್ಕೆ ಸರಿಸಮನಾದ ಇನ್ನೊಂದು ಸಮಾಜವನ್ನು ಕಟ್ಟುವ ತಹತಹವನ್ನು ಇವರು ಹೊಂದಿದ್ದರು ಎಂಬುದು ಗೊತ್ತಾಗುತ್ತದೆ. ಅಲ್ಲದೆ ರಾಜರನ್ನು, ಶ್ರೀಮಂತರನ್ನು, ದಣಿಗಳನ್ನು ತಮ್ಮ ಕತೆಗಳಲ್ಲಿ ನಾನಾ ರೀತಿಯ ಕಷ್ಟಗಳಿಗೆ ಗುರಿಪಡಿಸುವುದು, ಅವರನ್ನು ಹಂಗಿಸಿ ಗೇಲಿ ಮಾಡುವುದು, ಪಂದ್ಯದಲ್ಲಿ ಸೋಲುವಂತೆ ಮಾಡಿಸುವುದು, ನಡುಬೀದಿ ಯಲ್ಲಿ ನಿಲ್ಲಿಸಿ ಅವಮಾನ ಪಡಿಸುವುದು ಮುಂತಾದುವುಗಳ ಮೂಲಕ ಕಪಿ ಮುಷ್ಟಿಯ ಭದ್ರ ವ್ಯವಸ್ಥೆಯನ್ನು ಅಭದ್ರಗೊಳಿಸುವ ಕಾರ್ಯಕ್ಕೆ ಕೈಹಾಕಿರುವುದು ಕಂಡುಬರುತ್ತದೆ. ಇದು ಸಾಹಸದ ಕೆಲಸ. ಭಯಾನಕವಾದ ವಾತಾವರಣದಲ್ಲೂ ರಾಜನಂಥದೇ ಪಾತ್ರವನ್ನು ಸೃಷ್ಟಿಸಿ ಆ ಮೂಲಕ ಆತನ ಆಳ್ವಿಕೆಯನ್ನು ಧಿಕ್ಕರಿ ಸುವಂಥ ಮನೋಭಾವದ ತಳದಲ್ಲಿ ಬಂಡಾಯದ ಬೀಜಗಳಿವೆ" – (ರಂಗಾರೆಡ್ಡಿ ಕೋಡಿರಾಂಪುರ: 'ಜನಪದ ಸಾಹಿತ್ಯದಲ್ಲಿ ಬಂಡಾಯದ ಧೋರಣೆ'–'ಜನಪದ' ಮೇ 1982).

ಇನ್ನು ಯಾವುದೇ ವರ್ಗದ ನಂಬಿಕೆಗಳನ್ನು ಉದಾಹರಣೆಯಾಗಿ ತೆಗೆದು ಕೊಂಡರೂ ಅದರಲ್ಲಿ ಅವರವರ ಬದುಕಿನ ವಾಸ್ತವ ಸತ್ಯಗಳನ್ನು ಕಾಣುತ್ತೇವೆ. 'ಶಾಸ್ತ್ರ ಸಂಪ್ರದಾಯಗಳಿಗೆ ಹೋಗುವಾಗ ವಿಧವೆಯರನ್ನು ಕರೆದುಕೊಂಡು ಹೋಗ ಬಾರದು" ಎಂಬ ನಂಬಿಕೆಯಲ್ಲಿ, ಗಂಡನನ್ನು ಕಳೆದುಕೊಂಡವರು ಶುಭ ಕಾರ್ಯಗಳಲ್ಲಿ ಭಾಗವಹಿಸಕೂಡದು ಎಂಬುದು ಸಮಾಜ ವಿಧಿಸಿರುವ ನಿಷೇಧ. 'ಮಕ್ಕಳಿರುವ ಮನೆಗೆ ಬರಿಗೈಯಲ್ಲಿ ಹೋಗಬಾರದು' ಎಂಬ ನಂಬಿಕೆ ಮಾನವೀಯ ಗುಣವನ್ನು ಸಾದರಪಡಿಸುವಂಥದ್ದು. ಮುತ್ತೈದೆಯರು ಬಳೆ ತೊಡಿಸಿಕೊಳ್ಳುವಾಗ ಅಲ್ಲಿಗೆ ಇನ್ನೊಬ್ಬ ಮುತ್ತೈದೆ ಬಂದರೆ ಅವಳಿಗೂ ಬಳೆ ತೊಡಿಸಬೇಕು, ಇದು ಗಂಡನುಳ್ಳ ವಳಿಗೆ ಸಮಾಜ ಕೊಟ್ಟಿರುವ ಗೌರವದ ಸ್ಥಾನ. ಮುತ್ತೈದೆತನ ಸದಾಕಾಲ ಉಳಿ ಯಲಿ ಎಂಬ ಉದಾತ್ತ ತತ್ವ ಈ ನಂಬಿಕೆಯಲ್ಲಿ ಅಡಗಿದೆ. ಕಾಲಕ್ರಮೇಣ ಇಂಥ ನಂಬಿಕೆಗಳು ಬದುಕಿನ ಸೂತ್ರಗಳಾಗಿ ಸಮಾಜದಲ್ಲಿ ಸ್ಥಾನ ಪಡೆದು ಸಾರ್ವತ್ರಿಕತೆ ಪಡೆದುವು. ಮೂಢನಂಬಿಕೆಗಳಿಂದಾಗುವ ತೊಂದರೆಗಳನ್ನು ಜನ ಲೆಕ್ಕಕ್ಕೆ ತೆಗೆದು ಕೊಳ್ಳಲಿಲ್ಲ. ಸತ್ತ ನನ್ನ ತಾತನೋ ಅಜ್ಜಿಯೋ ಸ್ವರ್ಗ ಸೇರಬೇಕಾದರೆ, ಅವರ ಆತ್ಮಕ್ಕೆ ಶಾಂತಿ ದೊರಕಬೇಕಾದರೆ ಗೋವುಗಳನ್ನು ದಾನ ಮಾಡುವುದು, 'ನಿಧಿ' ಗಳಿಗೆ ಬಲಿ ಅರ್ಪಿಸುವುದು–ಇತ್ಯಾದಿ–ಇಂಥವುಗಳನ್ನು ಪ್ರಶ್ನಿಸುವ ಗೋಜಿಗೇ ಅವರು ಹೋಗುವುದಿಲ್ಲ. ಹೀಗೆ ನಂಬಿಕೆಗಳ ಪ್ರಾಬಲ್ಯಗಳಿಗೆ ಕಟ್ಟುಬಿದ್ದ ಜನರ ಮಾನಸಿಕ ಸ್ಥಿತಿ ಎಂಥದ್ದೆಂಬುದು ಅರಿವಾಗುತ್ತದೆ.

ಗಾದೆಗಳು ಜನರ ಮನಸ್ಸನ್ನು ಅರ್ಥೈಸಿಕೊಳ್ಳಲು ತುಂಬ ಉಪಯುಕ್ತ ವಾದುವು ; ಇವು ಜೀವನಾನುಭವದ ಅತ್ಯಂತ ಸಂಕ್ಷಿಪ್ತ ಅಭಿವ್ಯಕ್ತಿಗಳು. ಸಮಾಜ ದಲ್ಲಿನ ಮೌಢ್ಯ, ರೋಷ, ಕೆಚ್ಚು, ನೋವು ನಲಿವು, ಶೀಲ-ಅಶ್ಲೀಲ, ಒಳಿತು-ಕೆಡಕು-ಮೊದಲಾದ ಅನೇಕ ಮುಖಗಳನ್ನು ಗಾದೆಗಳು ಬಿಡಿಸುತ್ತವೆ. 'ರಾಮನಿಗೆ ರಾಜ್ಯವಾದರೆ ರಾಗೀ ಬೀಸೋದು ತಪ್ಪೀತೆ' ಎಂಬ ಗಾದೆ ನಿತ್ಯದ ಶ್ರಮ ಜೀವನ ವನ್ನು ಚಿತ್ರಿಸುತ್ತದೆ. ಬಡವನ ಕೋಪ ದವಡೆಗೆ ಮೂಲ, ಬಡವರು ಮಾಡಿದ್ರೆ ವ್ಯಭಿಚಾರ, ಬಲ್ಲಿದರು ಮಾಡಿದ್ರೆ ವ್ಯವಹಾರ, ಬಡದೇವರ ಕಂಡ್ರೆ ಬಿಲ್ಪತ್ರೆ ಬುಸ್ಸಂತು, ಬಡವನ ಹೆಂಡ್ರು ಊರಿಗೆಲ್ಲಾ ಸೊಸೆ-ಇವೆಲ್ಲ ಬಡವನ ಸ್ಥಿತಿಯನ್ನು ವರ್ಣಿಸುತ್ತವೆ. ತಮ್ಮ ದುಃಸ್ಥಿತಿಗೆ ಕಾರಣ ಹುಡುಕದ ಜನರು ವಿಧಿಯ ಕೈವಾಡ ಎಂದು ನಂಬುವುದನ್ನು ಗಾದೆಗಳಲ್ಲಿ ಕಾಣುತ್ತೇವೆ. 'ಹಣೆ ಬರಕ್ಕೆ ಹೊಣೆ ಯಾರು' ಎನ್ನುತ್ತಾರೆ. ಜನಪದ ಗೀತೆಗಳಲ್ಲಿ ಕಂಡುಬರುವಂತೆ ಗಾದೆಗಳಲ್ಲೂ ಹೆಣ್ಣನ್ನು ತಿರಸ್ಕಾರ ಮನೋಭಾವದಿಂದ ನೋಡಿರುವುದನ್ನು ಕಾಣುತ್ತೇವೆ. 'ಹೆಣ್ಣು ಹೆತ್ತೋರು ಹಣ್ಣಾದ್ರು-ಗಂಡು ಹೆತ್ತೋರು ಗುಂಡಾದ್ರು' ಎಂಬ ಅನುಭವದ ಜೊತೆಗೆ 'ಹೆಣ್ಣು ಹೆಣಕ್ಕೆ ಅಳ್ತು ಗಂಡು ಗಂಟಿಗೆ ಅಳ್ತು' ಎಂಬ ಗಾದೆಯಿದೆ.

"ಸೋಲಾಪುರದ ಬೀಜ ಬಿತ್ತಾಕ ಬತ್ತದ ಕಿತ್ತಾಕ ಬರಲ್ಲ" ಇದು ಹಚ್ಚೆ ಯನ್ನು ಕುರಿತ ಒಗಟು. ಹಚ್ಚೆ ಹೊಯ್ಸಿಕೊಳ್ಳುವಂಥದ್ದು ಒಂದು ಕಾಲದಲ್ಲಿ ಕಡ್ಡಾಯವಾಗಿತ್ತು. ಇದು ಕೂಡ ಸೌಭಾಗ್ಯದ ಸಂಕೇತ. ಪ್ರಪಂಚದಾದ್ಯಂತ ಹಿಂದುಳಿದ ಪಂಗಡಗಳಲ್ಲಿ ಈ ಸಂಪ್ರದಾಯ ರೂಢಿಯಲ್ಲಿದೆ. ಇಲ್ಲಿ ಹಚ್ಚೆಯನ್ನು ಬೀಜ ಬಿತ್ತುವಂಥ ಕ್ರಿಯೆಯೊಂದಿಗೆ ಅನ್ವಯಿಸಿ ಹೇಳಿದೆ.

**ಸಾವಿರ ರೂಪಾಯಿ ಶಂಖ ನೂರು ರೂಪಾಯಿಗೋಣಿ**
**ಗೋಣಿ ಬಿಚ್ಚೋತನಕ ಧಾರಣೆ ಗೊತ್ತಾಗೋದಿಲ್ಲ'**

ಈ ಒಗಟಿನ ಉತ್ತರ ಹೆಂಗಸಿನ ಬಸಿರು. ಶಂಖ ಪವಿತ್ರತೆಯ ಸಂಕೇತ. ಇದನ್ನು ಗಂಡಿಗೆ ಹೋಲಿಸಿದೆ. ಕಡಿಮೆ ಬೆಲೆಯ ಗೋಣಿ ಚೀಲವನ್ನು ಹೆಣ್ಣಿಗೆ ಹೋಲಿ ಸಿದೆ. ಈ ಚೀಲಕ್ಕೆ ಮಾನ್ಯತೆ ದೊರಕುವುದು ಅದರೊಳಗಿನ ವಸ್ತುವಿನಿಂದ. ಹೀಗೆ ಗಂಡು-ಹೆಣ್ಣಿನ ಮೇಲು ಕೀಳುಗಳನ್ನು ಈ ಒಗಟು ಮಾರ್ಮಿಕವಾಗಿ ಬಿಡಿಸುತ್ತದೆ.

ಹೀಗೆ ಜನಪದ ಸಾಹಿತ್ಯಪ್ರಕಾರಗಳಾದ ಹಾಡು, ಕಥೆ, ಗಾದೆ, ಒಗಟು, ಸಂಪ್ರದಾಯ, ನಂಬಿಕೆ-ಇವೆಲ್ಲ ಯಾವುದೇ ವ್ಯಕ್ತಿಯ-ಸಮಾಜದ ಸಾಂಸ್ಕೃತಿಕ ಅಧ್ಯಯನಕ್ಕೆ ವಿಶೇಷ ಆಕರಗಳಾಗುತ್ತವೆ. ○

# ಸೃಷ್ಟಿಯೂ ಸನಾತನವೂ

**ಪೋಲಂಕಿ ರಾಮಮೂರ್ತಿ**

ಡಾ॥ ತಿರುಮಲೇಶರು ನಾನು ಎಲ್ಲಿ "ಸೃಷ್ಟಿ", "ಪ್ರಕೃತಿ", Cosmos, Nature ಎಂದಿದ್ದೇನೆಯೋ ಅಲ್ಲಿ "ದೇವರು" ಎಂದು ಭರ್ತಿಮಾಡಿಕೊಂಡು, ಆ ಮಾತನ್ನು ನನ್ನ ಬಾಯಿಯಲ್ಲಿ ಹಾಕಿ ನನಗೆ ಅಪಚಾರ–ಅಪರಾಧ–ಮಾಡಿದ್ದಾರೆ: ನೋಡಿ, ತಿರುಮಲೇಶರು ಹೇಳುತ್ತಾರೆ–"ಬೊಳುವಾರರು ಚಿತ್ರಿಸುವ ಈ ಜಗತ್ತಿನಿಂದ ಡಾ॥ ಪೋಲಂಕಿಯವರ ಕಾಸ್ಮೋಸ್‌ಗೆ ಯಾವ ಪ್ರಯಾಸವೂ ಇಲ್ಲದೆ ಬರಬಹುದು ದೇವರ ಬದಲು ಸೃಷ್ಟಿ ಎಂಬ ಪದವನ್ನು ಉಪಯೋಗಿಸಿ", **(ವಾರ್ತಾಪತ್ರ ೨೪ ನವೆಂಬರ್ ೮೩)**

ಡಾ॥ ತಿರುಮಲೇಶರು, ಅವರು ಹೇಳುತ್ತಿರುವಂತೆಯೇ, ನನ್ನ "ಸೃಷ್ಟಿ"ಯ ಬದಲು ಅವರ "ದೇವರು" ಉಪಯೋಗಿಸಿ ನಮ್ಮೆಲ್ಲರ ಕಣ್ಣ ಚುಚ್ಚಿ ಕುರುಡಾಗಿಸುವ ಪ್ರಯತ್ನ ಮಾಡಿದ್ದಾರೆ. "ಆದ್ದರಿಂದ ಡಾ॥ ಪೋಲಂಕಿಯವರ 'ಜೈವಿಕ' ವಾದಕ್ಕೂ ಸನಾತನಿಗಳ 'ದೈವಿಕ'ವಾದಕ್ಕೂ ಮೊತ್ತದಲ್ಲಿ ಯಾವ ವ್ಯತ್ಯಾಸವೂ ಇಲ್ಲದಿರುವುದು." ಡಾ॥ ತಿರುಮಲೇಶ್.

ನನ್ನ ಈ ಬಗೆಗಿನ ಲೇಖನಗಳೆಲ್ಲವೂ, ಓದುಗರು ಅರಿತಂತೆ, ಈ ಸನಾತನದಲ್ಲಿನ ಮೂಲಭೂತ ಜಾತಿ ವ್ಯವಸ್ಥೆಯ **ಅಸಮತೆಯನ್ನು** ವಿರೋಧಿಸಿಯೇ, ಅಲ್ಲಗಳೆದೇ ಅಲ್ಲವೇ–ನನ್ನ ಸೃಷ್ಟಿ–ಪ್ರಕೃತಿವಾದ, ಅಥವಾ ಚಿಂತನೆ–ನಿಂತಿರುವದು ? ನನ್ನ "ಸೃಷ್ಟಿಯಲ್ಲಿ ಸಮತೆ" ಲೇಖನ ಸ್ಥಾಪಿಸುತ್ತಿರುವುದು ? ಅಂದಾಗ ತಿರುಮಲೇಶರು–ನನಗೆ ಅವರು ಲೇಖನದುದ್ದಕ್ಕೂ ಡಾಕ್ಟರಿಸಿದ್ದಾರೆ, ನಾನು ಬರವಣಿಗೆಯ ಸರಳತೆಗಾಗಿ ಅವರನ್ನು ಬಹುವಚನಿಸುವಷ್ಟಕ್ಕೆ ಸಲಿಗೆ ತೋರುತ್ತಿದ್ದೇನೆ–ಅವರ "ಸನಾತನ"ವನ್ನು ನನ್ನ "ಸೃಷ್ಟಿ"ಗೆ ಸಮೀಕರಿಸಿರುವುದು, ಅಲ್ಲದೆ ಅದನ್ನೂ ಅವರ

"ದೇವರಿ"ಗೆ ಭರ್ತಿಮಾಡಿಕೊಂಡಿರುವುದು ನನಗೆ ತುಂಬಾ ನೋವನ್ನುಂಟು ಮಾಡುವ ವಿಷಯವಾಗಿದೆ.

ಇಂಗ್ಲೀಷಿನಲ್ಲಿ God is made in the image of man- ಅಂದರೆ "ದೇವರು ಮಾನವಕಲ್ಪಿತ, ಮಾನವನ ಸ್ವಪ್ರತಿಮೆ" ಎನ್ನುವ ಅರ್ಥದ ಮಾತಿದೆ. ಮಾನವನು ತನ್ನ ಪ್ರಜ್ಞೆಯಲ್ಲೇ ಹುಟ್ಟಿದ ಅಸಮಂತೆ ತಾರತಮ್ಯಗಳನ್ನು, ಸ್ವರ್ಗ ನರಕಗಳನ್ನು ಎರಕಹೊಯ್ದು "ದೇವರು" ಮಾಡುತ್ತಾನೆ; ಆ ಮಾನವ "ದೇವರು" ದುಷ್ಟಶಿಕ್ಷಕ ಶಿಷ್ಟ ರಕ್ಷಕನಾಗುತ್ತಾನೆ. ಆ ಮಾನವ "ದೇವರು", ಪುರುಷಸೂಕ್ತದಂತೆ, ಬಾಯಿಂದ ಬ್ರಾಹ್ಮಣರನ್ನು, ಭುಜದಿಂದ ಕ್ಷತ್ರಿಯರನ್ನು, ತೊಡೆಯಿಂದ ವೈಶ್ಯರನ್ನು, ಪಾದದಿಂದ ಶೂದ್ರರನ್ನು ಸೃಷ್ಟಿಸುತ್ತಾನೆ: ಆ ಮಾನವ "ದೇವರು" "ಬ್ರಾಹ್ಮಣ" ನೇ ಆಗಿ "ಭೂಸುರ" ನಾಗುತ್ತಾನೆ: ಭೂಸುರನಾಗಿ" ಶೂದ್ರ ಶಂಭೂಕನನ್ನು ಕೊಲ್ಲಿಸುತ್ತಾನೆ, ಹಸುಳೆ ಉಪಪಾಂಡವರನ್ನು ಕೊಂದು ಕೊಲೆಗಾರನಾದರೂ ಕೊಲ್ಲಲಾರದವನಾಗುತ್ತಾನೆ: "ದೇವರು" ಆಗುತ್ತಾನೆ. ಆ ದೇವರು ಆಗಿಯೇ ಅನಾದಿಕಾಲ ದಿಂದಲೂ ಪೂಜೆಗೊಳ್ಳುತ್ತಾನೆ ಪ್ರಜಾಪ್ರಭುತ್ವವಾದ ಭಾರತದ ಮೊದಲ ಪ್ರಜೆಯೂ ರಾಷ್ಟ್ರಪತಿಯೂ ಆದ ರಾಜೇಂದ್ರಪ್ರಸಾದರಿಂದ ನೂರು ಜನ ಬ್ರಾಹ್ಮಣರಲ್ಲಿ ಪಾದ ತೊಳೆಸಿಕೊಳ್ಳುತ್ತಾನೆ. ಆ ಅಮಾನುಷತೆಗೆ ರಾಮ ಮನೋಹರ ಲೋಹಿಯಾರಂತಹ ಮಾನವರನ್ನು ದಿಗ್ಭ್ರಾಂತ ಗೊಳಿಸುತ್ತಾನೆ: ಆ ಮಾನವ ಕಪೋಲಕಲ್ಪಿತ "ದೇವರೇ" ಜೊಳುವಾರರ, ತಿರುಮಲೇಶರ "ದೇವರು". ಆ "ದೇವರ"ನ್ನು "ಸೃಷ್ಟಿಗೆ""ಪ್ರಕೃತಿ"ಗೆ, Nature, Cosmos ಗೆ ಸಮೀಕರಿಸುವುದು ಅಕ್ಷಮ್ಯವಾದ ಅನಕ್ಷರತೆ ಎಂದು ತಿಳಿಯಬೇಕಾಗುತ್ತದೆ.

ನೋಡಿ, ಉದಾಹರಣೆಗೆ ತಿರುಮಲೇಶರೇ ಉದ್ಧರಿಸಿದ ಜೊಳುವಾರರ ಕಥೆಯಲ್ಲಿ "ಸೃಷ್ಟಿ" ಮತ್ತು "ದೇವರು" ಒಂದಕ್ಕೊಂದು ಹೇಗೆ ವಿರುದ್ಧವಾಗಿದೆ ಎಂಬುದನ್ನು. ಕಥೆ ಹೇಳುತ್ತದೆ—"ದೇವರ ಇಚ್ಛೆಯಂತೆ ಅವನು (ಜೋಸೆಫನು)ಬಡವನೂ, ಆರೋಗ್ಯವಂತನೂ ಆಗಿದ್ದನು." ಇಲ್ಲಿ ಜೋಸಫನು "ಬಡವ" ನಾಗಿರುವುದು "ದೇವ" ರಿಂದ, ಮಾನವನಿರ್ಮಿತ ದೇವರಿಂದ; ಆದರೆ ಅವನು "ಆರೋಗ್ಯವಂತ" ನಾಗಿರುವುದು ಸೃಷ್ಟಿಯಿಂದ, ಪ್ರಕೃತಿಯಿಂದ, Nature ನಿಂದ. ಬಡತನದ ವ್ಯವಸ್ಥೆ ಮಾನವಕಲ್ಪಿತವಾದದ್ದು, ಮಾನವ ಹುಟ್ಟುಹಾಕಿದ ಧರ್ಮ— ದೇವರ ನಿರ್ಮಿತವಾದದ್ದು. Blessed are the poor, ದರಿದ್ರರೇ ಪುಣ್ಯವಂತರು, ಎಂಬ ಮಾತನ್ನು ಧರ್ಮಗ್ರಂಥ, ಬೈಬಲ್ಲು ಹೇಳುತ್ತದೆ, ದೇವಮಾನವನಿಂದ ಹೇಳಿ

ಸುತ್ತದೆ. ಗೇವರ ವಾಕ್ಯವೆನ್ನುತ್ತದೆ-gospel, ದೇವರ ವಚನ, ಎನ್ನುತ್ತದೆ. ಆದ್ದರಿಂದ "ಬಡತನ" ಚಿರಂತನವಾಗುತ್ತದೆ, ಶಾಶ್ವತವಾಗುತ್ತದೆ—"ದೇವರಂತೆಯೇ".

ಆದರೆ "ಆರೋಗ್ಯ", ಬಡವನ ಆರೋಗ್ಯ ಸೃಷ್ಟಿದತ್ತವಾದದ್ದು, ನೇಚರಿಸ ಕೊಡುಗೆ. ಏಕೆಂದರೆ ಬಡವ ಕಾಯಕದವ. ಕಾಯಕದ ಕಸರತ್ತೇ ಅವನ ರಕ್ತ ಚಲನೆಯನ್ನು ರಕ್ತ ಶುದ್ಧಿಯನ್ನು ದೇಹಾರೋಗ್ಯವನ್ನು ಕಾಪಾಡುತ್ತದೆ, ಬೆಳೆಸುತ್ತದೆ. ಶ್ರಮಜೀವಿಯು ತಿಂದ ಆಹಾರ ಜೀರ್ಣವಾಗುತ್ತದೆ, ರಕ್ತವಾಗುತ್ತದೆ, ಮಾಂಸ ಮೂಳೆಯಾಗುತ್ತದೆ, ಪುಷ್ಟವಾಗುತ್ತದೆ-ಸುಂದರವಾಗುತ್ತದೆ. ಆದ್ದರಿಂದಲೇ ಪ್ರಪಂಚದ ಎಲ್ಲಾ ಭಾಗಗಳಲ್ಲೂ, ಎಲ್ಲಾ ಕಾಲದಲ್ಲೂ ಕಾಯಕದ ಬಡವರು, ಶ್ರಮಜೀವಿ ಕೆಳವರ್ಗದವರು ದೃಢಕಾಯರಾಗಿರುತ್ತಾರೆ, ಚೆಲುವರಾಗಿರುತ್ತಾರೆ. ಉದಾಹರಣೆಗೆ, ಅನಂತಮೂರ್ತಿಯವರ ಕಥೆಗಳಲ್ಲಿ ಶೂದ್ರ, ದಲಿತ, ಹೆಣ್ಣುಗಳು, ಬ್ರಾಹ್ಮಣ ಹೆಣ್ಣುಗಳೊಡನೆ ಅವರೇ ಹೋಲಿಸಿ ತೋರಿಸಿದಂತೆ ಪುಷ್ಟರಾದ, ದೇಹಾಂಗ ಪುಷ್ಕಳತೆಯುಳ್ಳ, ಚೆಲುವೆಯರು-ಕಾಮಿಸುವಷ್ಟು ಸುಂದರೆಯರು. ಇ. ಎಂ. ಫೋಸ್ಟರನೂ ಭಾರತೀಯ ಮೇಲ್ವರ್ಗದ ನಾಗರೀಕರನ್ನು ಅಸ್ಪೃಶ್ಯರಿಗೆ ಹೋಲಿಸುತ್ತಾ ಈ ಮಾತನ್ನು ಹೇಳುತ್ತಾನೆ. This man would have been noticeable anywhere: among the thinhammed, flatchested mediocrities of Chandrapore he stood out as divine, yet he was of the city, its garbage had nourished him, he would end on its rubbish heaps." ಈ ಮಾತುಗಳನ್ನು ಎಲ್ಲಾ ಕಾಲದೇಶಗಳ ಶ್ರಮಜೀವಿಗಳ, ದಲಿತರ ಬಗ್ಗೆ ಶೋಷಿತ ಕೆಳವರ್ಗಗಳ ಬಗ್ಗೆ, working class ಬಗ್ಗೆ ಹೇಳಬಹುದಲ್ಲವೇ ?

ಇಲ್ಲಿ ಗಮನಿಸಬೇಕಾದದ್ದು ಏನೆಂದರೆ ಸೃಷ್ಟಿ–ಪ್ರಕೃತಿ ಶ್ರಮಜೀವಿಗೆ ಸಹಜವಾಗಿಯೇ, ಅವನಿಗೆ ಆಶ್ರಮದಿಂದಲೇ, ಆರೋಗ್ಯ-ಚೆಲುವುಗಳನ್ನುಗಳಿಸಿಕೊಡುತ್ತದೆ. ಆರೋಗ್ಯಪಾಠ ಹೇಳುವಂತೆ Circulation is health; stagnation is death. ದಣಿಯುವ ಬೆವರುವ ಜೀವಿ ತನ್ನಲ್ಲಿ ಇಮ್ಯೂನಿಟಿ, ರೆಸಿಸ್ಟೆನ್ಸ್, ಸ್ಟ್ಯಾಮಿನಾ (immunity, resistance, stamina) ಗಳನ್ನು ಗಳಿಸಿಕೊಳ್ಳುತ್ತಾನೆ. ಮೊನ್ನೆತಾನೆ ನನಗೆ ನನ್ನ ಬಂಧುಗಳೊಬ್ಬರು ತರಗಾರನೊಬ್ಬ ಕುಂದಾಪುರದ ಕಟ್ಟಡವೊಂದರಿಂದ ನಲವತ್ತಡಿ ಎತ್ತರದಿಂದ ದೊಪ್ಪನೆ ಕಾಂಕ್ರೀಟ್ ನೆಲದಮೇಲೆ ಬಿದ್ದು, ತಲೆ ಕಿವಿಗಳಿಂದ ರಕ್ತಸ್ರಾವವಾಗಿ

ಪ್ರಜ್ಞೆ ತಪ್ಪಿದನೆಂದೂ, ಹೇಗೆ ಅವನನ್ನು ಮಣಿಪಾಲಿಗೆ ರವಾನಿಸಲಾಯಿತೆಂದೂ, ಅಲ್ಲಿ ಇಳಿಸುವಾಗ ಅವನ ಸ್ಟ್ರೆಚರಿನ ದೋಣಿ ರಕ್ತದಿಂದ ತುಂಬಿತ್ತೆಂದೂ, ಹೇಗೆ ಅಲ್ಲಿನ ಡಾಕ್ಟರುಗಳು ಅವನು ಉಳಿಯುವುದು ಸಾಧ್ಯವಿಲ್ಲವೆಂತಲೇ ಅವನಿಗೆ ರಕ್ತ ಕೊಟ್ಟು ಆಪರೇಷನ್ ಮಾಡಿದರೆಂದೂ, ಆದರೆ ಅವರೆಲ್ಲರಿಗೂ ಅವಾಕ್ಕಾಗುವಂತೆ ಆ ಮನುಷ್ಯ ಸಿಧಾನವಾಗಿ ಪ್ರಜ್ಞೆಗೆ ಮರಳಿ, ಈಗ ಒಂದು ತಿಂಗಳಾದ ಮೇಲೆ, ತರಗಾರ ಕೆಲಸಕ್ಕೆ ಸಿದ್ಧನಾಗಿರುವನೆಂದೂ ಹೇಳುತ್ತಾ ಆ ಶ್ರಮಜೀವಿಯ ಅತ್ಯಾಶ್ಚರ್ಯಕ Staminaವನ್ನು ಕೊಂಡಾಡಿದರು.

ಆದರೆ ತಿರುಮಲೇಶರು ಹೇಳುತ್ತಾರೆ. "ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದ ವರ್ಗದಲ್ಲಿ ಇಮ್ಯೂನಿಟಿಯ ಬಗ್ಗೆ ಹೇಳುವ ಡಾ|| ಪೋಲಂಕಿ ಇದೇ ವರ್ಗಗಳಲ್ಲಿ ಅತಿ ಹೆಚ್ಚಿನ ಅಕಾಲಮರಣಗಳು ಸಂಭವಿಸುತ್ತವೆ. ಆ ಕಡಿಮೆ ಆಯುರ್ಮಾನವಿರುವುದೂ ಈ ಜನರಲ್ಲೇ ಎಂಬ ಬಗ್ಗೆ ಹೇಳುವುದಿಲ್ಲ?" ತಿರುಮಲೇಶರ Statistics, ಅಂಕಿಅಂಶ, ಚಿತ್ರದ ಅರ್ಧಕ್ಕೆ ಸತ್ಯ: ಇನ್ನರ್ಧಕ್ಕೆ ಅದು ಕಣ್ಣು ಮುಚ್ಚಿಕೊಂಡಿದೆ. ಬಗ್ಗಡತನದಲ್ಲಿ ಒಂದು ಹೊತ್ತೂ ಸರಿಯಾದ ಆಹಾರವಿಲ್ಲದೆ, ಆ ಆಹಾರದಲ್ಲೂ ಪೌಷ್ಟಿಕಾಂಶ ಸಾಕಷ್ಟಿಲ್ಲದೆ. ಜರ್ಝರಿತನಾಗಿ, ಶೋಷಣೆಗೆ ತುತ್ತಾದ ಜೀವಿ ತನಗೆ ಪ್ರಕೃತಿಯಿಂದ ದತ್ತವಾದ, ತನ್ನ ಜೀವದ ಶ್ರಮದಿಂದಲೇ ಲಭ್ಯವಾದ, ಇಮ್ಯೂನಿಟಿ, ರೆಸಿಸ್ಟೆನ್ಸ್, ಸ್ಟ್ಯಾಮಿನಾಗಳನ್ನು ಎಲ್ಲಿಯವರೆಗೆ ರಕ್ಷಿಸಿಕೊಳ್ಳಬಲ್ಲ? ನಮ್ಮ ದೇಶದಲ್ಲಿ ದಲಿತರಲ್ಲಿ ಹೊಟ್ಟೆಗಿಲ್ಲದೇ ಸಾಯುವವರೆಷ್ಟು! ಅರ್ಧಕ್ಕಿಂತಲೂ ಹೆಚ್ಚು ಜನ ದರಿದ್ರರೇಖೆಯ ಕೆಳಗೇ ಇದ್ದಾರೆ. ಅವರಲ್ಲೂ ದಲಿತರು, ಅಸ್ಪೃಶ್ಯರು, ಇನ್ನೂ ಭೀಕರವಾದ ಬರದಲ್ಲಿ ಪ್ರಾಣ ಹಿಡಿದುಕೊಂಡಿದ್ದಾರೆ: ಬಾಣಂತಿಯರು ಕ್ಷೀಣಿಸಿ, ರಕ್ತಸ್ರವಿಸಿ, ಸಾಯುತ್ತಾರೆ; ಮಕ್ಕಳು ಹಾಲಿಲ್ಲದೆ ಸಾಯುತ್ತವೆ. ಈ ಅಮಾನುಷ ಪರಿಸ್ಥಿತಿಯಲ್ಲಿ ದಲಿತರು ಸಂಪೂರ್ಣ ನಿರ್ನಾಮವಾಗಿ, ನಿರ್ವಂಶವಾಗಿ, ಅಳಿದುಹೋಗದೇ ಇರುವುದೇ ಆಶ್ಚರ್ಯ: ಅವರಿನ್ನೂ ಉಳಿದಿರುವುದಕ್ಕೆ ಸೃಷ್ಟಿ— ಪ್ರಕೃತಿ ಅವರಿಗೆ ಕೊಟ್ಟಿರುವ ಇಮ್ಯೂನಿಟಿ, ರೆಸಿಸ್ಟೆನ್ಸ್, ಸ್ಟ್ಯಾಮಿನಾಗಳೇ ಆ ಪವಾಡ, ಅಲ್ಲವೇ? ಅಂತಹದರಲ್ಲಿ ಎರಡು ಹೊತ್ತು ಹಿಟ್ಟು ನುಂಗುವ ಜೀತದಾಳು, ಅಸ್ಪೃಶ್ಯ ಪುಷ್ಟನಾಗಿರುತ್ತಾನೆ, ಪುಷ್ಕಳವಾಗಿ ಬೆಳೆಯುತ್ತಾನೆ. ಈ ದಲಿತರ ದಾರಿದ್ರ್ಯ ಪರಿಸ್ಥಿತಿ ಮೇಲ್ಜಾತಿಯವರಿಗಿದ್ದಲ್ಲಿ ಅವರಲ್ಲಿ ಪ್ರತಿ ಒಬ್ಬ ಸಾಯುವ ದಲಿತನಿಗೆ ನಾಲ್ಕೈದು ಜನ ಸಾಯುತ್ತಿದ್ದರೆಂದರೆ ಉತ್ಪ್ರೇಕ್ಷೆಯಾಗಲಾರದಲ್ಲವೇ ? ರಕ್ತಸ್ರಾವವಾದ ದಲಿತ ತರಗಾರನಿಗೆ ರಕ್ತಕೊಟ್ಟ ಮೇಲೆ ಅವನು ಚೇತರಿಸಿಕೊಂಡ: ಸ್ಕೂಟರಿನಿಂದ ಬಿದ್ದು ರಕ್ತಸ್ರಾವಗೊಂಡವರಲ್ಲಿ ಎಷ್ಟು ಜನ ರಕ್ತ ತೆಗೆದುಕೊಂಡು ಅವನಂತೆ ಬದುಕಿಯಾರು ?

ಇಲ್ಲಿ ನೋಡಿ, ತಿರುಮಲೇಶರ ಅಂಕಿಅಂಶಕ್ಕೆ ಎದುರಿಗಿರುವ ಸತ್ಯಾಂಶವನ್ನು: ಅವರು ಹೇಳುತ್ತಿರುವ "ಅಕಾಲಮರಣಕ್ಕೀಡಾಗುವ" ಹಾಗೂ "ಕಡಿಮೆ ಆಯುರ್ಮಾನವಿರುವ" ದಲಿತ ಅಸ್ಪೃಶ್ಯರು ಈ ನಾಡಿನ ಐದನೇ ಒಂದು ಭಾಗದಷ್ಟಕ್ಕೆ ಬೆಳೆದ ಜನಸಂಖ್ಯೆಯುವರಾಗಿದ್ದಾರಲ್ಲಾ, ಸಾವಿರಾರು ವರ್ಷಗಳ ತೊತ್ತುಳತುಳಿಯಲ್ಲೇ ಜೀವಂತರಾಗಿ ಬದುಕಿ ವೃದ್ಧಿಗೊಳ್ಳುತ್ತಿದ್ದಾರಲ್ಲಾ ಆದರೆ ಅದಕ್ಕೆ ವಿರುದ್ಧವಾಗಿ ಅನಾದಿಕಾಲದಿಂದಲೂ ಪೋಷಿತರಾಗಿ ಪೂಜೆಗೊಂಡ, ಪೌಷ್ಟಿಕ ಆಹಾರಗಳಾದ ಹಾಲು ಮೊಸರು ತುಪ್ಪಗಳನ್ನು ಸೇವಿಸುತ್ತಾ ಬಂದಿರುವ ಬ್ರಾಹ್ಮಣ ಉಚ್ಚವರ್ಗ ಕೇವಲ ನಾಡಿನ 4 ಅಥವಾ 5ರ ಶೇಕಡದಷ್ಟಕ್ಕೆ ಹ್ರಸ್ವವಾಗಿದೆಯಲ್ಲಾ, ಮೇಲಿದ್ದ ಉಚ್ಚವರ್ಗಗಳೆಲ್ಲಾ, ಅಸ್ಪೃಶ್ಯ ಜನಸಂಖ್ಯೆಗೆ ಹೋಲಿಸಿದರೆ ಮೈನಾರಿಟಿಯೇ ಆಗಿವೆಯಲ್ಲಾ, ಅದರ ರಹಸ್ಯವೇನು? ನಮ್ಮಲ್ಲಿನ ಷೆಡ್ಯೂಲ್ಡ್ ಕಾಸ್ಟ್ ಮತ್ತು ಟ್ರೈಬ್‌ಗಳನ್ನು ನಾವು ಸೇರಿಸಿಕೊಂಡರಂತೂ ಅವರು ಭಾರತೀಯ ಜನಸಂಖ್ಯೆಯ 13ಕ್ಕಿಂತಲೂ ಹೆಚ್ಚಿನ ಜನಸಂಖ್ಯೆಯುವರು–ಹರಿಜನ ಗಿರಿಜನ ದಲಿತ ಅಸ್ಪೃಶ್ಯರು.

ತಿರುಮಲೇಶರ ಸ್ಟ್ಯಾಟಿಸ್‌ಟಿಕ್ಸ್, ಅಂಕಿಅಂಶ ಎರಡೂ ಕಣ್ಣಿನಿಂದ ನೋಡಿದ ಚಿತ್ರದ್ದಾಗಬೇಕು: ಆಗ ತಿಳಿಯುತ್ತದೆ ಹೇಗೆ ದಲಿತ ಅಸ್ಪೃಶ್ಯರಲ್ಲೇ ಹೆಚ್ಚಿನ fertility, ಸಂತಾನ ಸಂಪತ್ತೂ ಹೆಚ್ಚಿದೆ, ಹೇಗೆ ಅವರಲ್ಲೇ ಹೆಚ್ಚಿನ ಎಂಡ್ಯೂರೆನ್ಸ್ endurance ಸರ್ವೈವಲ್ survival, ಧಾರಣೆ, ಬಾಳುವಿಕೆಗಳು, ಅವರಿಗಿರುವ ಹ್ಯಾಂಡಿಕ್ಯಾಪ್ handicapಗಳೊಡನೆ ಹೋಲಿಸಿದಾಗ, ಇರಲಿಕ್ಕೆ ಸಾಕು ಎನ್ನುವ ಸತ್ಯಾಂಶ. ಅವರಲ್ಲಿ ಬಹಳ ಜನ ಅಕಾಲಮರಣಕ್ಕೆ ಈಡಾಗುತ್ತಾರೆ ಏಕೆಂದರೆ ಅವರು ಕೆಲಸಮಾಡುವ ಗಣಿಗಳು, ಕಟ್ಟಡಗಳು ಕುಸಿದು ಅವರು ಸಾಯುತ್ತಾರೆ; ಅವರನ್ನು ಮೇಲ್ವರ್ಗದ ಜನರು ಬೇಟೆಯಾಡಿ, ಅವರ ಗುಡಿಸಲಿಗೆ ಬೆಂಕಿ ಇಕ್ಕಿ ಕೊಲ್ಲುತ್ತಾರೆ; ಅಸ್ಪೃಶ್ಯರನ್ನು ಹಳ್ಳಿಗಳಲ್ಲಿ ಚಿಲ್ಲರೆ ವಿಷಯಕ್ಕೆ ಅನಾಯಾಸವಾಗಿ ಕೊಂದುಬಿಡುತ್ತಾರೆ. ಇಂತಹ ಅನೇಕ ಮನುಷ್ಯಮಾಡಿದ, ಸೃಷ್ಟಿಸಿದ ಅಪಘಾತಗಳಿಂದಲೇ ಹೆಚ್ಚು ಪ್ರಮಾಣದಲ್ಲಿ ದಲಿತರು ಅಕಾಲಮರಣಕ್ಕೆ ಈಡಾಗುತ್ತಾರೆ. ಇದರ ಜೊತೆಗೆ ಅವರು ಇರುವ ಅನಾರೋಗ್ಯಕರ ಹೊಲಗೇರಿಗಳು, ಅವರು ತಿನ್ನಬೇಕಾದ ಹಳಸಿದ, ಕೊಳೆತ ಆಹಾರ ಪದಾರ್ಥಗಳು, ಅವರಿಗಿರುವ ಸೊಳ್ಳೆ ತಿಗಣೆ ಇಲಿ ಹೆಗ್ಗಣಗಳ ರಕ್ತ–ಆಹಾರ ಶೋಷಕ ಪಿಡುಗುಗಳು–ಈ ಎಲ್ಲಾ ಹ್ಯಾಂಡಿಕ್ಯಾಪ್‌ಗಳನ್ನು ಎದುರಿಗೆ ಇಟ್ಟುಕೊಂಡು ನೋಡಿದರೆ, ಅವರು ಈ ಅಪಾರ ಜನಸಂಖ್ಯೆಯಲ್ಲಿ ಅನಾದಿಕಾಲದಿಂದಲೂ ಉಳಿದೇ, ಬಾಳುತ್ತಲೇ, ವೃದ್ಧಿಗೊಳ್ಳುತ್ತಿರುವುದನ್ನು ಗಮನಿಸಿದರೆ ದಲಿತ ಎಷ್ಟು ಚಿರಂಜೀವಿ ಎನ್ನುವುದು ಗೊತ್ತಾಗುತ್ತದೆ. ದಲಿತ ಚಿರಂಜೀವಿ ಏಕೆಂದರೆ ಅವನು ಶ್ರಮಜೀವಿ: ಶ್ರಮ-

ಜೀವಿ ರಕ್ತಸಂಚಾರಿ, ರಕ್ತಸಂಚಾರಿ ಆರೋಗ್ಯಿ, ಆರೋಗ್ಯವೇ ಸೃಷ್ಟಿಯ ಔದಾರ್ಯ; ಒಬ್ಬ ವೈದ್ಯವಿಜ್ಞಾನಿ ಹೇಳುವಂತೆ ಮಾನವನು ತನ್ನ ದೇಹ ಭಾಗಗಳ ಸಂಕೀರ್ಣ ಜಗತ್ತನ್ನು ನೆನೆಸಿಕೊಂಡರೆ ಅವನು ಸದಾ ಒಂದಲ್ಲ ಒಂದು ರೋಗಕ್ಕೆ, ಅಸ್ವಸ್ಥತೆಗೆ, ಈಡಾಗಿರಬೇಕು. ಆದರೆ ಅವನು ಆರೋಗ್ಯಕರವಾಗಿರುವುದು ಸೃಷ್ಟಿಯ ಪವಾಡವೇ ಸರಿ. ಅದೀಗ ಸೃಷ್ಟಿಯ ಔದಾರ್ಯ, ಹೀಗೆ ಆರೋಗ್ಯ ದಿಂದ ದೇಹಸೌಷ್ಟವ ದೇಹಸೌಷ್ಟವದಿಂದ ಚೆಲುವು, ಚೆಲುವಿನಿಂದ ಕಲೆ-ಬೆಳೆಯು ತ್ತವೆ, ಸೃಷ್ಟಿಯ ಔದಾರ್ಯದಲ್ಲಿ.

ಇನ್ನು ತಿರುಮಲೇಶರು ನನ್ನ "ಸೃಷ್ಟಿ" ಲೇಖನಗಳಲ್ಲಿನ ದಲಿತ ಮತ್ತು ಕಲೆ ಗಳಿಗಿರುವ, ಜನಕ್ಕೂ ಜಾನಪದಕ್ಕೂ ಇರುವ ಸಂಬಂಧದ ನೈಸರ್ಗಿಕತೆಯನ್ನು ಪ್ರಶ್ನಿಸಿದ್ದಾರೆ. ನೋಡಿ, ಎಲ್ಲಾ ಕಾಲದೇಶಗಳಲ್ಲೂ ಶ್ರಮಜೀವಿಗಳಿಂದಲೇ ಜಾನಪದ ಕಲೆಗಳು ಹುಟ್ಟಿರುವುದು ಅಲ್ಲವೇ ? ಪ್ರಾಜ್ಞರೆಲ್ಲರೂ ಒಪ್ಪುವಂತ ಕಲೆ ಗಳಲ್ಲೆಲ್ಲಾ, ಅಂದರೆ ಸಾಹಿತ್ಯ ಸಂಗೀತ ಶಿಲ್ಪ ನೃತ್ಯ ಇತ್ಯಾದಿಗಳಲ್ಲೆಲ್ಲಾ, ನೃತ್ಯ ಅತ್ಯಂತ ಪ್ರಾಚೀನವಾದದ್ದು ಎಂದು ಆದಿಮಾನವ ಮಾತನಾಡುವುದನ್ನು ಕಲಿಯು ವುದಕ್ಕೆ ಮುಂಚೆ, ಹಾಡುವುದಕ್ಕೆ ಮುಂಚೆ, ಕುಣಿಯುತ್ತಾನೆ. ಬೇಟೆಗಾರ ಬೇಟೆ ಯಾಡಿ ಕುಣಿಯುತ್ತಾನೆ. ಬೇಟೆಗಾರರೆಲ್ಲಾ ಒಟ್ಟಾಗಿ ಕುಣಿಯುತ್ತಾರೆ, ಹಾಡು ತ್ತಾರೆ. ಹಾಗೆಯೇ ಜನರಿಂದ, ಜನಸಾಮಾನ್ಯ ದಲಿತರಿಂದ ಜಾನಪದ ಹುಟ್ಟು ತ್ತದೆ-ನಮ್ಮಲ್ಲಿನ ಅಸ್ಪೃಶ್ಯರಿಂದ ಅನೇಕಾನೇಕ ಜಾನಪದ ಕಲೆಗಳು, ಚರ್ಮದ ಮದ್ದಲೆಗಳ, ಕರುಳಿನ, ತಂತಿಗಳ, ಮೂಳೆಗಳ ವಾದ್ಯಗಳ ಜಾನಪದ ಕಲೆಗಳು ವಿಪುಲವಾಗಿ ಬೆಳೆದಿವೆ. ನೀಗ್ರೋಜನರ ಮದ್ದಲೆ ಕಲೆಗಳು, ಅಮೆರಿಕಾ ಕಪ್ಪುಜನರ ಜಾಜ್ ಕಲೆಗಳು. ಆದರೆ ಅದೇ ಪ್ರಮಾಣದಲ್ಲಿ, ಅಷ್ಟೇ ನೈಸರ್ಗಿಕವಾಗಿ ಮೇಲ್ಜಾ ತಿಯವರಲ್ಲಿ ಕಲೆಗಳು ಬೆಳೆದಿಲ್ಲ. ಮೇಲ್ಜಾತಿಯವರು ಪ್ರಜ್ಞಾ ಪೂರ್ವಕವಾಗಿ, ಕಲೆಗಳನ್ನು ಹುಟ್ಟಿಸಿಕೊಳ್ಳುತ್ತಾರೆ. ಬೆಳೆಸುತ್ತಾರೆ-ಕಲ್ಟಿವೇಟ್ ಮಾಡುತ್ತಾರೆ: ಆದರೆ ದಲಿತ ಶ್ರಮಜೀವಿಗಳು ಇನ್‌ಸ್ಟಿಂಕ್ಟಿವ್ ಆಗಿ ತಮ್ಮ ಒಳಗಿನ ಖುಷಿಗೆ, ರಕ್ತದ ಒತ್ತಡಕ್ಕೆ, ಜೀವೋತ್ಕರ್ಷಕ್ಕೆ, ಜ್ವಾದ್ ವೀವ್ರ್ Joie de vivreಗೆ ಕುಣಿಯುತ್ತಾರೆ, ಹಾಡುತ್ತಾರೆ, ಕೆತ್ತುತ್ತಾರೆ, ಕೊರೆಯುತ್ತಾರೆ, ಚಿತ್ರಿಸುತ್ತಾರೆ, ಬರೆಯುತ್ತಾರೆ.

ಇನ್ನೊಂದು ಮಾತು. ನೋಡಿ, ದಲಿತ ಕರ್ಮ, ಶ್ರಮಜೀವ, ಹೇಗೆ ತನ್ನಲ್ಲೇ ಕಲೆಯ ಸಾಂತ್ವನವನ್ನು ಪಡೆದುಕೊಳ್ಳುತ್ತದೆ ಎನ್ನುವುದನ್ನ ದಣಿದ ಶ್ರಮಪಟ್ಟ, ಖಾಯಿಲೆಯ ಮನುಷ್ಯ ಮುಲುಕುತ್ತಾನೆ, ಹುಂಗುಟ್ಟುತ್ತಾನೆ: ಜ್ವರ

ಬಂದವನು ಹುಂ. ಹುಂ. ಎಂದು ಮುಲುಕುವುದರಿಂದ ಅವನಿಗೆ ಸ್ವಲ್ಪ ನೆಮ್ಮದಿ ಯಾಗುತ್ತದೆ. ಆ ದಣಿದ ಜ್ವರದಿಂದ ಸೋತ ಮನುಷ್ಯನ ನೈಸರ್ಗಿಕ ಹೂಂ. ಗುಟ್ಟುವುದರಲ್ಲಿ ಒಂದು ತರ rhythm ಇದೆ, ಲಯವಿದೆ. ಹಾಗೆಯೇ ಬತ್ತ ಕುಟ್ಟು ವಾಗ ಹೂಂ ಗುಟ್ಟುತ್ತಾಳೆ, ಹುಟ್ಟು ಹಾಕುವವನು 'ಹುಸ್ಸ್' ಎನ್ನುತ್ತಾನೆ. ಒಗೆ ಯುವ ಅಗಸ 'ಉಸ್' ಎನ್ನುತ್ತಾನೆ. ಹೀಗೆಯೇ ಸಹಜವಾದ, ನೈಸರ್ಗಿಕವಾದ ಇನ್‌ಸ್ಟಿಂಕ್‌ನಂತಹ ಹೂಂಗುಟ್ಟು, ಹೊಯ್ ಕಾರ, ಉಸ್ಸಪ್ಪ ತನ್ನದೇ rhythm ಕಂಡುಕೊಂಡು ಹಾಡಾಗುತ್ತದೆ-ಕುಟ್ಟುವ ಕ್ರಿಯೆ ಸುವ್ವಿ. ಸುವ್ವಿ ಹಾಡಾಗುತ್ತದೆ. ಹುಟ್ಟಿನ ಹೊಯ್, ಹೊಯ್ ಹೊಯ್ಯಾರೆ ಹೊಯ್ಯ ದೋಣಿ ಹಾಡಾಗುತ್ತದೆ; ಎಲೆಕ್ಟ್ರಿಕ್ ಕಂಬ ಹೂಳುವವರ "ಐಸಾ" ಒಂದು ಮನರಂಜಕ ಹಾಡಾಗಿಯೇ ಬೆಳೆಯುತ್ತಾ ಹೋಗುತ್ತದೆ. ಹೀಗೆಯೇ ಗೀ ಗೀ ಪದಗಳೂ, ಮೂಗಿನ ಅನಸ್ವಾ ರಕ್ಕೆ ಲಯಬದ್ಧವಾಗಿ ಗುಯ್‌ಗುಡುವ ಗೀತೆಗಳು ಬೆಳೆಯುತ್ತವೆ: ಚರ್ಮ, ತಂತಿ, ಮೂಳೆ, ಮರ, ಮಣ್ಣು ವಾದ್ಯಗಳು ಸೃಷ್ಟಿಯಾಗುತ್ತವೆ: ಜಾನಪದ, ಜನ ರಿಂದ ದಲಿತ ಶ್ರಮಜೀವಿ ಸಾಮಾನ್ಯರಿಂದ ಹರಿಯುತ್ತದೆ.

ಜಾನಪದ, ಸೃಷ್ಟಿಯ ಔದಾರ್ಯವೆಂದಿದ್ದೇನೆ; ಏಕೆಂದರೆ ಶ್ರಮಕ್ಕೆ ಸಾಂತ್ವನ ವಾಗಿ, ಉತ್ಸಾಹಕ್ಕೆ, ಆನಂದಕ್ಕೆ, ಉತ್ತೇಜಕವಾಗಿ ಕಲೆ ಇನ್‌ಸ್ಟಿಂಕ್ಟ್‌ನಲ್ಲೇ ಹುಟ್ಟಿ ಬೆಳೆಯುತ್ತದೆ. ಈಗಲೂ ನಾನು ಗಂಗೋತ್ರಿಯ ಮಹಡಿಮೇಲೆ ಎಂ. ಎ. ವಿದ್ಯಾರ್ಥಿಗಳಿಗೆ ಪಾಠಮಾಡುತ್ತಿರುವಾಗ ಬಂಡಿ ಹೊಡೆದುಕೊಂಡು ಹೋಗುವ ಕುಕ್ಕರ ಹಳ್ಳಿ ದಲಿತ, ಪಡಿವಾರಹಳ್ಳಿ ಶ್ರಮ ಜೀವಿ, ಹಾಡುತ್ತಾ ಹೋಗುತ್ತಾನೆ. ನಮ್ಮ ಷೇಕ್ಸ್‌ಪಿಯರಿನ ಪಾಠವನ್ನು ನಿಲ್ಲಿಸುವಷ್ಟು ಆನಂದದಲ್ಲಿ! ಆ ದಲಿತ, ಶ್ರಮಜೀವಿ, ಮುಕ್ತವಾಗಿ ಹಾಡುವಂತೆ ನಮ್ಮ ಇಡಿ ಗಂಗೋತ್ರಿಯ ಬುದ್ಧಿಜೀವಿ ಪ್ರೊಫೆಸರುಗಳು, ಅಧ್ಯಾಪಕರು ಒಬ್ಬರಾಗಲೀ ಹಾಡುವುದಿಲ್ಲ, ಗುನುಗುವುದಿಲ್ಲ; ಬುದ್ಧಿಜೀವಿ ವಿದ್ಯಾರ್ಥಿ ಗಳು ಹಾಡಿದರೂ ಅವು ಸಿನಿಮಾ. ಶಾಸ್ತ್ರೀಯ ಗೀತೆಗಳಾಗಲಿ ದಲಿತ ಶ್ರಮಜೀವಿಗಳ ಜಾನಪದಗಳಲ್ಲ ಬಯಲು ನಾಟಕದ ಸಾಲುಗಳಲ್ಲ. ಬುದ್ಧಿಜೀವಿಗಳನ್ನು ಕುರಿತು ಕಾನ್ರಾಡಿನ ಕಥೆಗಳಲ್ಲಿನ ಒಬ್ಬ ನಾವಿಕ ಹೇಳುವ ಈ ಮಾತು ನೆನಪಿಟ್ಟುಕೊಳ್ಳು ವಂತಹದು: ನಾವಿಕರಲ್ಲಿ ಜಂಟಲ್‌ಮನ್ (gentleman) ಯಾರು ಎಂಬ ಪ್ರಶ್ನೆ ಬಂದಾಗ ಒಬ್ಬ ನಾವಿಕ ತನ್ನ ಡೆಫಿನಿಷನ್ ಹೀಗೆ ಕೊಡುತ್ತಾನೆ: "ಜಂಟಲ್‌ಮನ್" ಎಂದರೆ ಅವನ ಪ್ಯಾಂಟಿನ ಹಿಂಭಾಗ ಸವೆದಿರುತ್ತದೆ-ಕುರ್ಚಿಯ ಮೇಲೆ ಕೂತೂ ಕೂತೂ." ಹೀಗೆ ಮೇಲುವರ್ಗದ ನೆಮ್ಮದಿಜೀವನದ ನಾವು ಬುದ್ಧಿಜೀವಿ ಕುಂಡೆ ಸವುಕರೇ. ಕಲೆ ಸೃಜನಾತ್ಮಕ ಕ್ರಿಯಾಕ್ರಾಂತಿ, ದಲಿತ ಶ್ರಮಜೀವಿಗಳ, ವರ್ಕಿಂಗ್

ಕ್ಲಾಸಿನ, ಕಾಯಕದ ಜೀವಂತರಲ್ಲಿ ಹೆಚ್ಚಾಗಿ ಬೆಳೆಯುವ ಸಾಧ್ಯತೆ ಇದೆ. ವಾಲ್ಮೀಕಿ ಬೇಡನೆನ್ನುತ್ತೇವೆ, ವ್ಯಾಸ ಬೆಸ್ತನೆನ್ನುತ್ತೇವೆ. ಪಂಪ ಯೋಧನೆನ್ನುತ್ತೇವೆ, ಹೋಮರನು ಕುರುಡುಗಾಯಕ ಎನ್ನುತ್ತೇವೆ, ಷೇಕ್ಸ್‌ಪಿಯರ್ ನಟನೆನ್ನುತ್ತೇವೆ, ಲಾರೆನ್ಸ್ ವರ್ಕಿಂಗ್ ಕ್ಲಾಸ್ ಎನ್ನುತ್ತೇವೆ: ಅಂದ ಮಾತ್ರಕ್ಕೆ ಬುದ್ಧಿಜೀವಿ ಕುಂಡೆಸವುಕರಲ್ಲಿ ಕವಿಗಳು ಕಲೆಗಾರರು ಇಲ್ಲವೆನ್ನಲಾಗುವುದಿಲ್ಲ; ಇದ್ದಾರೆ, ಅವರ ಸಂಖ್ಯೆ ಕಡಿಮೆ. ಅವರ ಕಲೆ ಜಾನಪದ ಕಲೆಯಷ್ಟು ವಿಪುಲವೂ ವ್ಯಾಪಕವೂ ಅಲ್ಲ.

ನಮ್ಮಲ್ಲಿ ಕಾಯಕವೇ ಕೈಲಾಸವೆನ್ನುವ ಮಾತಿದೆ. ಅದನ್ನು ಕಾಯಕವೇ ಕಲೆ ಎಂದರೆ, ನಮ್ಮ ಜನಪದ ಸಾಹಿತ್ಯದ ಜನಸಾಮಾನ್ಯ ಶ್ರಮಜೀವಿಗಳ, ದಲಿತರ ಸಂದರ್ಭದಲ್ಲಿ, ಹೆಚ್ಚು ಅರ್ಥಪೂರ್ಣವಾಗುತ್ತದೆ, ಅಲ್ಲವೇ ?

ಅದೀಗ ಸೃಷ್ಟಿಯ ಔದಾರ್ಯ. ಸೃಷ್ಟಿಯಲ್ಲಿ ನೀರಿನಲ್ಲಿನ ನೀರಾನೆ ನೆಲದ ಮೇಲಿನ ಜಿಂಕೆ ಮರಿಯನ್ನು ಮೊಸಳೆಯಿಂದ ರಕ್ಷಿಸುತ್ತದೆ, ಮೈದಡವಿ ಮೈನೆಕ್ಕುತ್ತದೆ ಪ್ರೇಮದಲ್ಲಿ. ಸೃಷ್ಟಿಯಲ್ಲಿ ಆಕಾಶದಲ್ಲಿ ಹಾರುವ ಹಕ್ಕಿ ನೀರಿನಲ್ಲೀಜುವ ಮೀನುಗಳಿಗೆ ಕೊಕ್ಕಿನಿಂದ ಅಹಾರ ತಂದು ಹಾಕಿ ಅವು ಅದನ್ನು ತಿನ್ನುವುದನ್ನು ನೋಡುತ್ತದೆ: ಆ ಆಟವನ್ನು ಆಡುತ್ತದೆ. ಸೃಷ್ಟಿಯಲ್ಲಿ ಅನೇಕ ಮಾಂಸಾಹಾರಿ ಮೃಗಗಳು ಪುಟ್ಟ ವನ್ಯಜಂತುಗಳನ್ನು ಮೈನೆಕ್ಕಿ ಸಾಕುತ್ತವೆ ಕೂಡ. ಎಲ್ಲರಿಗೂ ಗೊತ್ತಿರುವಂತೆ ಮಾಂಸಾಹಾರಿ ತೋಳ ಮಾನವ ಶಿಶುವಿಗೆ ಮೊಲೆಯೂಡಿ ಸಲಹುತ್ತದೆ. ಅಂತಹ ತೋಳಮಕ್ಕಳನ್ನು ನಾವು Woolf boy ಎನ್ನುತ್ತೇವೆ. ರೋಮಿನ ಸ್ಥಾಪಕರೂ ಪೂರ್ವಜರೂ ಆದ ರೀಮಸ್ ಮತ್ತು ರಾಮ್ಯುಲಸ್ ಅವಳಿಜವಳಿಗಳು ತೋಳದ ಮೊಲೆಯುಂಡು ಬೆಳೆದ ವ್ಯಕ್ತಿಗಳು ಎನ್ನುತ್ತದೆ ಪುರಾಣ. ಸೃಷ್ಟಿಯಲ್ಲಿ ಕ್ರೌರ್ಯವೆನ್ನುವುದಕ್ಕೆ ಉದಾಹರಣೆ ಕೊಡುತ್ತಾ ತಿರುಮಲೇಶರು "ಹುಲಿಯು ಮೊಲವನ್ನು ಹಿಡಿದು ತಿನ್ನುತ್ತದೆ", ಎಂದಿದ್ದಾರೆ. ಅದು ಅಷ್ಟು ಸರಿಯಾದ ಉದಾಹರಣೆಯಲ್ಲ. ಏಕೆಂದರೆ ಹುಲಿ ಹಿಡಿದು ತಿನ್ನುವುದು ತನ್ನ ಒಂದು ಹಲ್ಲಿಗೂ ದಕ್ಕದ ಮೊಲವನ್ನಲ್ಲ. ಅದು ತನಗೆ 10-15 ದಿನಕ್ಕಾಗುವಷ್ಟು ಮಾಂಸ ತಿನ್ನಲು ಈಡಾಗುವ ಕಾಡು ದನವನ್ನು, ಕಡವೆಯನ್ನು, ಜಿಂಕೆಯನ್ನು: ಹುಲಿ ಒಮ್ಮೊಮ್ಮೆ ಆನೆಯನ್ನೇ ಬೇಟೆಯಾಡುವ ದಾರ್ಷ್ಟ್ಯದ್ದು, ತಿರುಮಲೇಶರು ಹೇಳುವಂತೆ ಹುಲಿ ಮೊಲವೊಂದು ಸಿಕ್ಕರೆ ಅದನ್ನು ಹಿಡಿದು ತಿನ್ನವುದಕ್ಕಿಂತ ಅದರ ಮೈ ನೆಕ್ಕಿ ಅದರ ಮೈದಡವಿ ಬಿಡುವ ಸಾಧ್ಯತೆಯೇ ಹೆಚ್ಚಿದೆ ಎನ್ನಬಹುದಲ್ಲವೇ ? ಏಕೆಂದರೆ ವನ್ಯ ಜೀವನದಲ್ಲಿ ದೊಡ್ಡ ಪ್ರಾಣಿಗಳು, ಮಾಂಸಾಹಾರಿಗಳೂ, ಚಿಕ್ಕಪುಟ್ಟ ಪ್ರಾಣಿಗಳ ಗೋಜಿಗೆ ಸಾಮಾನ್ಯವಾಗಿ ಹೋಗುವುದಿಲ್ಲ : ಬದಲಿಗೆ ಅವು ಅವನ್ನು ರಕ್ಷಿಸುವ ಒಲವನ್ನು ಉಳ್ಳನಾಗಿವೆ.

ನಾವು ಪ್ರೇಮ, ಔದಾರ್ಯ, ಆಲ್ಟ್ರೂಯಿಸಂ (Altruism) ಪರಹಿತವನ್ನು ಮಾನವರಾಗಿ ಗುತ್ತಿಗೆ ತೆಗೆದುಕೊಂಡಂತಿದೆ. ನಮ್ರತೆಯಿಂದ, ಜೀವ ವಿಶ್ವಕ್ಕೆ ನಮ್ಮನ್ನು ನಾವು ಬಿಚ್ಚಿಕೊಂಡು, ಮುಕ್ತ ಹೃದಯಿಗಳಾಗಿ ನಾವು ನೋಡಿದಾಗ ನಮಗೆ ತಿಳಿಯುತ್ತದೆ–ಹೇಗೆ ಸೃಷ್ಟಿಯಲ್ಲಿ ಪ್ರೇಮವಿದೆ. ಔದಾರ್ಯವಿದೆ. ಪರಹಿತವೂ ಇದೆ–ಅವ್ಯಾಜವಾದ ಪ್ರೇಮವೂ, ಅಹೇತುವಾದ ಪರಹಿತವೂ ಇವೆ, ಎಂಬುದು.

ಸೃಷ್ಟಿಯ, ಪ್ರಕೃತಿಯ, ಪ್ರೇಮ, ಔದಾರ್ಯ, ಪರಹಿತ, ಸೃಷ್ಟಿಯ ಬುದ್ಧಿ (Cosmic intelligence.) ನಮ್ಮ ಮಾನವ ಜಗತ್ತಿನ ಹ್ರಸ್ವಕ್ಕೆ ಮೀರಿದ್ದಾಗಿದೆ. ಆದ್ದರಿಂದಲೇ ಸೃಷ್ಟಿಯನ್ನು, ಕ್ರಿಯೇಷನ್ ಅನ್ನು, ಎಮಾರಲ್ (amoral) ಅನ್ನುವುದು. ಸೃಷ್ಟಿಯ ಔದಾರ್ಯ ಎಂತಹುದೆಂದರೆ ಅದು ಮಾನವನನ್ನೂ ಸೊಳ್ಳೆಯನ್ನೂ ಏಕವಾದ ಜೈವಿಕತೆಯಲ್ಲಿ ಬೆಳೆಸುತ್ತದೆ; ಇಬ್ಬರಿಗೂ ಇಮ್ಯೂನಿಟಿಯ ರಕ್ಷೆಯನ್ನು ಕೊಡುತ್ತದೆ, ಇಬ್ಬರನ್ನೂ ಸಮತೆಯಲ್ಲಿ ಅವರವರ ವೈವಿಧ್ಯತೆಯಲ್ಲಿ, ವೈಶಿಷ್ಟ್ಯದಲ್ಲಿ, ವೈಚಿತ್ರ್ಯದಲ್ಲಿ ಬೆಳೆಸುತ್ತದೆ: ಸೃಷ್ಟಿಯದು ನಿಷ್ಪಕ್ಷಪಾತ ಔದಾರ್ಯ, ಪ್ರೇಮ.

ಯಾವುದು ಸೃಷ್ಟಿಯೋ ಅದರ ವಿರೋಧವೇ ದೇವರು. ಸೃಷ್ಟಿಯಲ್ಲಿ ಸಮತೆ ಇದೆ, ಪ್ರೇಮವಿದೆ, ಔದಾರ್ಯವಿದೆ: ದೇವರಲ್ಲಿ ಭೇದವಿದೆ, ಜಾತಿವರ್ಣಗಳಿವೆ, ತಾರತಮ್ಯಗಳಿವೆ, ಹಿಂಸೆ ಇದೆ. ಸೃಷ್ಟಿಯಲ್ಲಿ ಬುದ್ಧಿ ಇದೆ, ಅದರಲ್ಲಿ ಬುದ್ಧ ಹುಟ್ಟುತ್ತಾನೆ; ದೇವರಲ್ಲಿ ನಂಬುಗೆ ಇದೆ; ಅದರಲ್ಲಿ ರಾಮರು ಕೃಷ್ಣರು ಹುಟ್ಟುತ್ತಾರೆ. ಸೃಷ್ಟಿಯ ಬುದ್ಧನಿಗೆ ದೇವರಿಲ್ಲ, ತಾನು ದೇವನೂ ಆಗುವುದಿಲ್ಲ. ದೇವರ ರಾಮರಲ್ಲಿ ಕೃಷ್ಣರಲ್ಲಿ, ದೇವರ ಅವತಾರಗಳಿವೆ-ಸಾಯಿಬಾಬಾ ಇದ್ದಾನೆ, ಭಗವಾನ ರಜನೀಶ ನಿದ್ದಾನೆ, ಬಂದೂಕಿನ ಬ್ರಹ್ಮಚಾರಿ ಇದ್ದಾನೆ. ಸೃಷ್ಟಿಯು ಗುಡ್ (Good) ಆದರೆ ದೇವರು ಈವಿಲ್ (evil) ಆಗಿದ್ದಾನೆ.

ಇನ್ನು ಸೃಷ್ಟಿಯಲ್ಲಿ ಹಿಂಸೆ ಇದೆಯೇ ಎನ್ನುವ ಪ್ರಶ್ನೆ ಗಂಭೀರವಾದದ್ದು. ತಿರುಮಲೇಶರು ಹುಲಿ ಮೊಲಗಳ ಕ್ರೌರ್ಯವನ್ನು, ಹಿಂಸೆಯನ್ನು, ಹೆಸರಿಸಿದ್ದಾರೆ. ಕಂದ ಮೂಲಗಳನ್ನು ತಿನ್ನುವ, ಮಧುಪರ್ಕಗಳನ್ನು ಸೇವಿಸುವ ಅಹಿಂಸಕ ಹೇಗೆ ಕಂದ ಮೂಲಗಳನ್ನು ಕೀಳುವಲ್ಲಿ ಸಸ್ಯಜೀವಿಗೆ ಎಷ್ಟರಮಟ್ಟಿನ ಹಿಂಸೆ ಕೊಡುತ್ತಾನೆ ಎಂಬುದನ್ನು ನೋಡಬೇಕಾದರೆ ಜಗದೀಶ್ ಚಂದ್ರಬೋಸರ ಹಾಗೂ ಸಮಕಾಲೀನ ವೈಜ್ಞಾನಿಕ ಪ್ರಯೋಗಗಳನ್ನು, ಅವುಗಳಲ್ಲಿ ಅವರು ಕಣ್ಣಿಗೆ ಕಟ್ಟುವಂತೆ ಸಸ್ಯಗಳು, ಅವುಗಳ ಎಲೆ ಕಿತ್ತಾಗ, ಅವುಗಳನ್ನು ಕಡಿದಾಗ, ಎಂತಹ ಹೃದಯವಿದ್ರಾವಕ ನೋವು

ಗಳನ್ನು ಅನುಭವಿಸುತ್ತವೆ ಎನ್ನುವುದು ತೋರಿಸುವುದನ್ನು ಕಾಣಬೇಕು. ಸಾಮಾನ್ಯ ನಾವ ಲೈಡಿಟೆಕ್ಟರ್ ಸಾಧನೆ ಉಪಯೋಗಿಸಿ, ಒಬ್ಬ ಒಂದು ಮರದ ಎಲೆಗಳನ್ನು, ತನ್ನ ಸಿಗರೇಟ್ ಲೈಟರ್‌ನಿಂದ ಸುಟ್ಟ: ಆಗ ಇಡಿಯ ಮರದ ಹೃದಯದ ಬಡಿತ ಭಯದಿಂದ ನಡುಗಲಾರಂಭಿಸಿತು. ಮರುದಿನ ಆ ಮನುಷ್ಯ ಮರದ ಹತ್ತಿರ ಬರುತ್ತಿದ್ದಂತೆಯೇ ಮರ ಅವನ ವಾಸನೆ ಹಿಡಿದ ಕೂಡಲೇ ಮತ್ತೆ ನಡುಗಲಾರಂಭಿಸಿತು: ಲೈಡಿಟೆಕ್ಟರ್ ಯಂತ್ರ ಅದರ ಹೃದಯದ ಬಡಿತದ ಉಲ್ಬಣವನ್ನು ಚಿತ್ರಿಸಿತ್ತು.

ಅಂದಾಗ ಕಂದಮೂಲ ಕಿತ್ತು ತಿನ್ನುವ ಬೈರಾಗಿ, ಹುಲಿ ಜಿಂಕೆಯನ್ನು ಕೊಲ್ಲುವ ಹಿಂಸೆಗಿಂತ ಕಡಿಮೆ ಹಿಂಸೆಮಾಡುತ್ತಾನೆಯೇ? ಅವನು ತಿನ್ನುವ ಮಧುಪರ್ಕ ದುಂಬಿಯ ಬಾಯಿ ಬಡಿದು ತಿನ್ನುವ ಜೇನು; ಕರುವಿನ ಬಾಯಿ ಬಡಿದು ತಿನ್ನುವ ಮೊಸರು, ಅಲ್ಲವೇ? ಸೃಷ್ಟಿಯಲ್ಲಿ ಹಿಂಸೆ ಇದೆಯೇ— ಈ ಗಂಭೀರ ಪ್ರಶ್ನೆಯನ್ನು ನಾನು ಮುಂದೆ, ಬಿಡುವಾದಾಗ, ನನ್ನ ಮುಂದಿನ ಲೇಖನದಲ್ಲಿ ವಿಶ್ಲೇಷಿಸುವ ಯೋಜನೆ ಇಟ್ಟುಕೊಂಡಿದ್ದೇನೆ.

ಈಗ ಇಷ್ಟು ನಾವು ಮನದಟ್ಟು ಮಾಡಿಕೊಳ್ಳುವ: ಸೃಷ್ಟಿಯ ಧರ್ಮವೇ ಜೀವಧರ್ಮ; ಜೀವದ ಧರ್ಮವೇ ಜೀವನ, the purpose of life is to live, to foster living. ಸೃಷ್ಟಿ ಜೀವವನ್ನು ಪೋಷಿಸುತ್ತದೆ, ನೀತಿ ಪ್ರೇಮ, ಔದಾರ್ಯ ಮಾನವ ಪ್ರಪಂಚದ ಹ್ರಸ್ವಕ್ಕೆ ಮೊಟಕುಮಾಡಿಕೊಂಡಾಗ ದೇವರು ಹುಟ್ಟುತ್ತಾನೆ, ಅವತಾರಗಳು ತಾಂಡವವಾಡುತ್ತವೆ, ತಿರುಮಲೇಶರ ಗೊಂದಲ ಪ್ರಾರಂಭವಾಗುತ್ತದೆ. ಎಲ್ಲಿ ಪುರುಷ ಪ್ರಯತ್ನವಿದೆಯೋ, ಶ್ರಮವಿದೆಯೋ, ಎಲ್ಲಿ ದಣಿವಿನ ಬೆವರು ಹರಿಯುತ್ತದೆಯೋ ಅಲ್ಲಿ ಸೃಷ್ಟಿಯಿದೆ, ಜೀವನಿದೆ, ಜೀವೋತ್ಕರ್ಷವಿದೆ, ಕಲೆ ಇದೆ-ಅಲ್ಲಿ ಪ್ರೇಮ ಔದಾರ್ಯಗಳು ಬೆವರಿನೊಂದಿಗೆ, ಹರಿಯುತ್ತವೆ. ಅದಕ್ಕೇ ಪ್ರಾಜ್ಞರು ಸೃಷ್ಟಿಯನ್ನು ಬ್ರಹ್ಮ ಎಂದರು: ಬ್ರಹ್ಮ ಎಂದರೆ ಬೆಳೆಯುವುದು, ದೊಡ್ಡದಾಗುವುದು ಎಂದರ್ಥ. ಆ ಬೆಳವಣಿಗೆಯೇ, ದೊಡ್ಡದಾಗುವಿಕೆಯೇ, ದೊಡ್ಡತನವೇ ಬ್ರಾಹ್ಮಣ. ಯಾವಾಗ ಮಾನವನು ಕಾಯದಲ್ಲಿ ಶ್ರಮದಲ್ಲಿ, ದಣಿವಿನಲ್ಲಿ, ಬೆವರು ಹರಿಸಿ, ರಕ್ತ ಸಂಚರಿಸಿ, ಬೆಳೆಯುವುದಿಲ್ಲವೋ ಬಾಳುವುದಿಲ್ಲವೋ ಆಗ ಅವನು ಬೆಳೆಯುವ ದೊಡ್ಡವನಾಗುವ, ಬ್ರಾಹ್ಮಣನಾಗುವುದಿಲ್ಲ - ಕುಂದಡೆಸವುಕ ಬುದ್ಧಿಜೀವಿಯಾಗುತ್ತಾನೆ. ಜಂಟಲ್‌ಮನ್ ಆಗುತ್ತಾನೆ, ಭೂಸುರನಾಗುತ್ತಾನೆ.

# ನನ್ನ ಬಾನುಲಿ ಪ್ರವೇಶ ಮತ್ತು...........

(ಅನುಭವ ಕಥನ) **ಮಹಾಬಲೇಶ್ವರ ರಾವ್**

ಇಂದಿನ ಅನೇಕ ವಿದ್ಯಾರ್ಥಿಗಳಿಗೆ ತಾನು ಹೀಗಾಗಬೇಕು, ಹಾಗಾಗಬೇಕು, ಇಂಥದೇ ಹುದ್ದೆಗೆ ಸೇರಬೇಕೆಂಬ ಆಸೆ ಇರುವಂತೆ ನಾನು ಓದುವ ಕಾಲಕ್ಕೆ ಅಂಥ ಯಾವ ಉದ್ದೇಶಗಳೂ ನನಗಿರಲಿಲ್ಲ. ಯಾವ್ಯಾವ ಬಗೆಯ ಸರಕಾರಿ ಖಾಸಗಿ ಕೆಲಸಗಳಿರುತ್ತವೆ ಎಂಬುದು ನನಗೆ ತಿಳಿದಿರಲಿಲ್ಲ. ಈ ದಿಸೆಯಲ್ಲಿ ನನಗೆ ಸೂಕ್ತ ಮಾರ್ಗದರ್ಶನವೂ ಇರಲಿಲ್ಲ. ಹೇಗೋ ಬಿ.ಎಸ್‌ಸಿ. ಮಾಡಿದೆ. ಸಾಹಿತ್ಯದ ಗೀಳಿನಿಂದಾಗಿ ಕನ್ನಡ ಡಿಪ್ಲೊಮಾ ಮಾಡಿಕೊಂಡೆ. ಬ್ರಹ್ಮಾವರದ ಹೈಸ್ಕೂಲೊಂದರಲ್ಲಿ ಸುಮಾರು 9 ತಿಂಗಳು ತಾತ್ಪೂರ್ತಿಕ ಕನ್ನಡ ಅಧ್ಯಾಪಕನಾಗಿ ಕೆಲಸ ಮಾಡಿದ್ದರ ದೆಸೆಯಿಂದ ಬೋಧನೆಯಲ್ಲಿ ಆಸಕ್ತಿ ಹುಟ್ಟಿತು. ತರಬೇತಿ ಪಡೆದು ಅದಮಾರಿನ ಹೈಸ್ಕೂಲಲ್ಲಿ ಕನ್ನಡ ಶಿಕ್ಷಕನಾಗಿ ಸೇರಿಕೊಂಡೆ, ಈ ಸಂಸ್ಥೆಯಲ್ಲಿ ಸುಮಾರು 5 ವರ್ಷ ಕೆಲಸಮಾಡಿದೆ. ಆ ದಿನಗಳು ಇಂದಿಗೂ ಎಂದಿಗೂ ನನಗೆ ಹಿತಕರ ದಿನಗಳು ನನ್ನ ವೃತ್ತಿಪರ ಬೆಳವಣಿಗೆ, ಬೌದ್ಧಿಕ ಉನ್ನತಿ, ಅರ್ಹತೆಗಳ ಅಭಿವೃದ್ಧಿಯಿಂದ ನನಗೆ ಇಷ್ಟವಾದ ದಿನಗಳು.

ಅದಮಾರಿನಲ್ಲಿದ್ದಾಗಲೆ ನಾನು ಕರ್ನಾಟಕ, ವಿ.ವಿ.ಯ ಕನ್ನಡ ಎಂ.ಎ ಪರೀಕ್ಷೆಯನ್ನು ಖಾಸಗಿ ಅಭ್ಯರ್ಥಿಯಾಗಿ ಪಾಸುಮಾಡಿದೆ. ಆ ಸಮಯದಲ್ಲಿ ಧಾರವಾಡದಲ್ಲಿ ನನಗೆ ಬೆಂಗಳೂರು ಆಕಾಶವಾಣಿಯ ಬಿ.ಎಸ್. ಸ್ವಾಮಿಯ ಪರಿಚಯ ಆಗದಿರುತ್ತಿದ್ದರೆ ನಾನು ಬಾನುಲಿಯನ್ನು ಸೇರುತ್ತಿದ್ದೆನೋ ಇಲ್ಲವೋ ಹೇಳಲಾರೆ. 1978ರ ಮೇ ತಿಂಗಳ ಒಂದು ಸಂಜೆ ಧಾರವಾಡದ ಆಜಾದ್ ಪಾರ್ಕಿನಲ್ಲಿ ಸ್ವಾಮಿ ಬೆಂಗಳೂರು ಬಾನುಲಿ ಕೇಂದ್ರ ಪ್ರಸಾರಾಧಿಕಾರಿ ಹುದ್ದೆಗಳಿಗೆ ಅರ್ಜಿ ಕರೆಯುವ ಸಾಧ್ಯತೆ ತಿಳಿಸಿ ಅರ್ಜಿ ಹಾಕುವಂತೆ ನನ್ನನ್ನು ಪ್ರೇರೇಪಿಸಿದರು. ಮುಂದೆ ಅರ್ಜಿ ಹಾಕಿ ಅದನ್ನು ಮರೆತೇ ಬಿಟ್ಟ ಹೊತ್ತಿನಲ್ಲಿ ಡಿಸೆಂಬರ್ ತಿಂಗಳಲ್ಲಿ ಬೆಂಗಳೂರಲ್ಲಿ ಸಂದರ್ಶನವೂ

ನಡೆಯಿತು. ಡಾ|| ವಿ.ಕೆ. ಗೋಕಾಕ್, ಸಿದ್ಧಯ್ಯ ಪುರಾಣಿಕ್ ಅವರ ಹೆಸರನ್ನು ಕೇಳಿಬಲ್ಲ ಆದರೆ ಪರಿಚಯವಿರದ ನಾನು ಸಂದರ್ಶನದಲ್ಲಿ ಅವರೊಂದಿಗ ವಾಗ್ಯುದ್ಧ ಮಾಡಿದ ತೃಪ್ತಿಯಿಂದ-ನನಗೆ ಖಂಡಿತ ಹುದ್ದೆ ಸಿಗುವುದಿಲ್ಲ ಎಂಬ ನಂಬಿಕೆಯಿಂದ ಊರಿಗೆ ಮರಳಿದ್ದೆ.

ಆದರೆ 1979 ಜೂನ್‌ನಲ್ಲಿ ನನ್ನನ್ನು ಆಯ್ಕೆಮಾಡಿ ಭದ್ರಾವತಿ ಕೇಂದ್ರಕ್ಕೆ ನೇಮಕ ಮಾಡಲಾಗಿದೆ ಎಂಬ ಸುದ್ದಿ ಸಿಕ್ಕಾಗ ನನಗೆ ಸಂತೋಷ, ಆಶ್ಚರ್ಯ ಆಯಿತು. ಬಾನುಲಿಯಲ್ಲಿ ಮೂಡಿಬರುವ ಧ್ವನಿ ಕೇಳಿ ಮೆಚ್ಚಿದ್ದುಂಟು. ಆದರೂ ಬಾನುಲಿ ಕೇಂದ್ರವೊಂದರ ಸಿಬ್ಬಂದಿಯಾಗಿ ನನ್ನನ್ನು ನಾನು ಎಂದೂ ಊಹಿಸಿಕೊಂಡಿರಲಿಲ್ಲ. ಇದೀಗ ಪೀಕಲಾಟ; "ಹೋಗಲೆ, ಹೋಗದಿರಲೆ?" ಹತ್ತು ಹಲವರನ್ನು ಕೇಳಿದೆ· ಒಬ್ಬೊಬ್ಬರದೂ ಒಂದೊಂದು ಸಲಹೆ. ನನ್ನ ಸಹೋದ್ಯೋಗಿಗಳು "ಇಲ್ಯಾಕೆ ಕೊಳೀತೀರಿ? ಕೇಂದ್ರ ಸರಕಾರದ ಹುದ್ದೆ, ಬಡ್ತಿ ಸೌಲಭ್ಯವಿದೆ. ಹೋಗಬಾರದೆ?" ಎಂದು ಏರಿಸಿದರೆ ಮತ್ತೆ ಕೆಲವರು "ಇಲ್ಲೇ ಇರಿ" ಎಂದರು. ಒಳ್ಳೆ ತೊಳಲಾಟಕ್ಕೆ ಸಿಲುಕಿ ಅನಿಶ್ಚಿತತೆಯಲ್ಲಿ ಕಾಲಕಳೆದೆ. ಅಧ್ಯಾಪನದ ಮೇಲಿನ ಆಸಕ್ತಿಯಿಂದ ಆಹ್ವಾನವನ್ನು ತಿರಸ್ಕರಿಸಿದೆ. ಆದರೆ ಕಾಲ ಸರಿದಂತೆ ಅದಮಾರಿನ ಪರಿಸರದಲ್ಲಿ ಏನೋ ಕ್ಷೋಭೆ, ಕ್ಷುಲ್ಲಕ ರಾಜಕಾರಣ ದಿನೇ ದಿನೇ ಪರಿಸ್ಥಿತಿ ಹದಗೆಡುತ್ತಿರುವಂತೆ, ಹಳ್ಳಿಯ ಪ್ರಶಾಂತಿ ಮೂರಾಬಟ್ಟೆಯಾಗುತ್ತಿರುವಂತೆ ಭಾಸವಾಗತೊಡಗಿ ಬಾನುಲಿ ಕೇಂದ್ರಕ್ಕೆ ಸೇರಿಕೊಳ್ಳುವುದೆಂದು ನಿಶ್ಚಯಿಸಿದೆ. ಅಂತೂ ವಿಧ್ಯಾರ್ಥಿ ಸಂದೋಹವನ್ನು ಬಿಡಲಾರದೆ ಬೀಳ್ಕೊಂಡು ತವರುಮನೆಯ ಋಣ ತೊರೆಯಲಾರದೆ ಕಣ್ಣೀರು ಗರೆಯುತ್ತಾ ಸಾಗುವ ನವವಧುವಿನಂತೆ ಅದಮಾರಿಗೆ ವಿದಾಯ ಹೇಳಿ 1979 ಸೆಪ್ಟೆಂಬರ್ 19ಕ್ಕೆ ಭದ್ರಾವತಿ ಬಾನುಲಿ ಕೇಂದ್ರದಲ್ಲಿ ಪ್ರಸಾರಾಧಿಕಾರಿಯಾಗಿ ಹಾಜರಾದೆ. (ಅಂದು ಅದಮಾರನ್ನು ಬಿಟ್ಟ ಬಗ್ಗೆ ಯೋಚಿಸುವಾಗ ಸಮಸ್ಯೆಗಳಿಂದ ನಾನು ತಪ್ಪಿಸಿಕೊಳ್ಳಲು ಮಾಡಿದ ಪ್ರಯತ್ನವಿರಬಹುದೆ ಎಂಬ ಸಂಶಯ ಕಾಡುತ್ತದೆ.

ಬಾನುಲಿ ಕೇಂದ್ರದಲ್ಲಿ ನನ್ನ ಕೆಲಸಕಾರ್ಯಗಳ ಬಗ್ಗೆ ಸ್ಪಷ್ಟ ಕಲ್ಪನೆ ನನಗೆ ಇರಲಿಲ್ಲ. ಅಲ್ಲದೆ ಪಾಳಿಯಲ್ಲಿ ದುಡಿತ. ಊಟ, ತಿಂಡಿಗೆ ಹೊತ್ತುಗೊತ್ತಿಲ್ಲ. ಮೊದಲ ವಾರದಲ್ಲೇ ಬೇಸರ ಬಂದು ಹಿಂದೆ ಬರೋಣ ಅನ್ನಿಸಿತ್ತು. ಆದರೆ ಹುದ್ದೆ ಖಾಲಿ ಇರಬೇಕಲ್ಲ!

ಭದ್ರಾವತಿ ಮತ್ತು ಮಂಗಳೂರು ಕೇಂದ್ರ ಅಂತ ಹೇಳಿ ಒಟ್ಟು 2 ವರ್ಷ 10 ತಿಂಗಳು ಬಾನುಲಿಗೆ ನಾನು 'ಮಣ್ಣು ಹೊತ್ತಿದ್ದೇನೆ'. ಭದ್ರಾವತಿ ಕೇಂದ್ರದಲ್ಲಿ

ಏಕಕಾಲಕ್ಕೆ ಪ್ರಸಾರಾಧಿಕಾರಿ ಮತ್ತು ಉದ್ಘೋಷಿತನಾಗಿ ಒಂದು ಸೋಮವಾರ ಬೆಳಗ್ಗಿನಿಂದ ಮಂಗಳವಾರ ಮಧ್ಯಾಹ್ನ 2-30 ಗಂಟೆಯ ತನಕ ಕಾರ್ಯ ನಿರ್ವಹಿಸಿದ್ದು ಒಂದು ದಾಖಲೆ. ಚುನಾವಣೆ ಸಂದರ್ಭದ ಅಹರ್ನಿಶಿ ಕೆಲಸ, ಸ್ವಾತಂತ್ರ್ಯದಿನ, ರಾಜ್ಯೋತ್ಸವದಿನ, ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ, ತೀರ್ಥಹಳ್ಳಿಯಲ್ಲಿ ಎಂ. ಎನ್. ಜೈಪ್ರಕಾಶ್ ಏರ್ಪಡಿಸಿದ್ದ ಕುವೆಂಪು ಸನ್ಮಾನ ಹಾಗೂ ಹೆಗ್ಗೋಡು ಯಾತ್ರೆ ಇವೆಲ್ಲ ನನ್ನ ಸ್ಮೃತಿಯಲ್ಲಿ ಸದಾ ಹಸಿರಾಗಿರುತ್ತವೆ. ಜೊತೆಗೆ ನನ್ನನ್ನು ತುಂಬಾ ಪ್ರೋತ್ಸಾಹಿಸಿದ ಸ್ನೇಹ ಸೌಜನ್ಯ, ಹಾಸ್ಯ ಉತ್ಸಾಹದ ಮೂರ್ತಿ ಎಂ. ಎಸ್. ಶ್ರೀಹರಿ (ಕಾದಂಬರಿಕಾರ್ತಿ ಎಚ್. ಎಸ್. ಪಾರ್ವತಿಯವರ ಯಜಮಾನರು).

ಬಾನುಲಿಗೆ ಸೇರುವಾಗ ಅದೊಂದು ಬುದ್ಧಿವಂತರ, ಧೀಮಂತರ, ಸಂಗೀತ ಗಾರರ, ಕಲಾಕೋವಿದರ, ಪ್ರಾಜ್ಞರ, ಸಂವೇದನಾಶೀಲರ ಸಂಗಮಸ್ಥಾನ ಎಂದು ತಿಳಿದಿದ್ದೆ, ನಾನು ತುಂಬ ಆದರದಿಂದ ಕಾಣುವ ನನ್ನ ಸೋದರ ಶ್ರೀ ಜಿ. ರಾಜಶೇಖರ್ ಜಾರ್ಜ್ ಆರ್ವೆಲ್ ಬಿ ಬಿ.ಸಿ. ಯಲ್ಲಿದ್ದುಕೊಂಡು ಭಾಷೆ, ಸಂಸ್ಕೃತಿ, ಸಾಹಿತ್ಯದ ಬಗ್ಗೆ ಯೋಚನೆ ನಡೆಸಿದ್ದನ್ನು ಹೇಳಿದಾಗ ತುಂಬಾ ಖುಷಿಪಟ್ಟಿದ್ದೆ. ಆದರೆ ಬಾನುಲಿ ಪ್ರವೇಶಿಸಿದ ಕೆಲವೇ ತಿಂಗಳಲ್ಲಿ ಈ ಅಸಹ್ಯ ವಾತಾವರಣದಿಂದ ಉಸಿರುಕಟ್ಟಿಸುವ ಪರಸ್ಪರ ದ್ವೇಷಾಸೂಯೆಯ ಕ್ಷುಲ್ಲಕ ರಾಜಕಾರಣದ ಪರಿಸರದಿಂದ ಹೊರಗೆ ಓಡಿಬರಬೇಕೆಂಬ ಅದಮ್ಯ ಬಯಕೆ ಮೊಳೆಯಿತು. ಈ ದಿಸೆಯಲ್ಲಿ ನನ್ನ ಎಂ. ಎಡ್. ಪದವಿ ನೆರವಿಗೆ ಬಂತು. ಇಲ್ಲಿಯೂ ರಾಜಶೇಖರ್ ಅವರ ಸಲಹೆ ನನಗೆ ಸಹಕಾರಿಯಾಯಿತು.

ಪಿಸುಣರಿಗೆ, ಕೈ ಹೊಸೆಯುವವರಿಗೆ, ಹಲ್ಲುಗಿಂಜುವವರಿಗೆ, ಡೊಗ್ಗು ಸಲಾಮು ಹಾಕುವವರಿಗೆ, ವಿಧಿನಿಯಮಗಳನ್ನು ಅಸ್ತ್ರವಾಗಿಸಿಕೊಂಡು ಪ್ರತಿಭೆ ಮತ್ತು ಉತ್ಸಾಹ ವನ್ನು ಬಗ್ಗು ಬಡಿಯುವವರಿಗೆ ಬಾನುಲಿ ಹೇಳಿಮಾಡಿಸಿದ ಪ್ರಶಸ್ತ ಸ್ಥಳ. ಇಲ್ಲಿ ಒಬ್ಬ ಫ್ಯೂನ್‌ನಿಂದ ಹಿಡಿದು ನಿಲಯ ನಿರ್ದೇಶಕರವರೆಗೆ ಎಲ್ಲರೂ ದೊಡ್ಡವರೆ, ಮಹಾ ಬುದ್ಧಿವಂತರೆ. ಎದುರಲ್ಲಿ ನಯ, ವಿನಯ, ಲಲ್ಲೆ ಮೆಚ್ಚುನುಡಿ ಬೆನ್ನು ತಿರುಗಿದೊಡನೆ ಶುರುವಾಗುತ್ತದೆ ಹೊಂಡ ತೆಗೆಯುವ ಹೊಂತಗಾರಿಕೆ ಕಾರ್ಯಕ್ರಮ. ನಿರ್ಮಾಪಕರಿಗಿಂತ ತಾವೇ ಮೇಲೆನ್ನುವ ಇಂಜಿನಿಯರಿಂಗ್ ವಿಭಾಗ, ಸಮಾಜ ಮನ್ನಣೆ ತಮಗಿದೆ ಎನ್ನುವ ಕಾರ್ಯಕ್ರಮ ವಿಭಾಗ, ನಿಮ್ಮನ್ನು ಹದ್ದುಬಸ್ತಿನಲ್ಲಿಟ್ಟಿ ದ್ದೇವೆ ಎನ್ನುವ ಆಡಳಿತ ವಿಭಾಗ (ಬ್ರಿಟಿಷರ ಒಡೆದು ಆಳುವ ನೀತಿಯ ಪ್ರತಿಕೃತಿ ಇದು) ಹೀಗೆ ಪ್ರತಿಯೊಬ್ಬರೂ ತಮ್ಮಿಂದಲೆ ಬೆಳಗಾಗುತ್ತಿದೆ ಎಂದು ತಿಳಿದು ಪರರನ್ನು ಇಕ್ಕಿಮೆಟ್ಟಲು ಕಾದವರು.

ಒಬ್ಬನನ್ನು ಮಟ್ಟಹಾಕುವುದಕ್ಕೆ ಎಂಥ ಹೀನಕಾರ್ಯ ಮಾಡಲೂ ಹೇಸದ ಅಧಿಕಾರಿಗಳನ್ನು ನಾನು ಕಂಡಿದ್ದೇನೆ. ಪ್ರತಿಭೆ ಜನಮನ್ನಣೆ ಸಹಿಸಲಾಗದೆ ವೈಯಕ್ತಿಕ ಚಾರಿತ್ರ್ಯಹನನಕ್ಕೆ ಯತ್ನಿಸುವವರನ್ನು ಕಂಡಿದ್ದೇನೆ. ಒಬ್ಬನ ಕಾರ ದಕ್ಷತೆ ಬಗ್ಗೆ ಏನೂ ಗೊತ್ತಿಲ್ಲದೆ ಒಮ್ಮೆಯೂ ಪರೀಕ್ಷಿಸಿ ನೋಡದೆ, ದೂರದ ಬೆಂಗಳೂರಲ್ಲೇ ಕೂತು ಈತ ಬ್ರಾಹ್ಮಣನೆಂಬ ಕಾರಣಕ್ಕೆ 'ಇನ್ನಷ್ಟು ಸುಧಾರಿಸ ಬೇಕು' ಎಂಬ ರಹಸ್ಯವರದಿ ಬರೆಯುವ ನಿಲಯ ನಿರ್ದೇಶಕರು ನನಗೆ ಗೊತ್ತು. ಹೆಣ್ಣಿನ ಚಪಲವಿರುವ ನಿಲಯ ನಿರ್ದೇಶಕರನ್ನು ತಮ್ಮ ಬುಟ್ಟಿಯೊಳಗೆ ಹಾಕಿಕೊಂಡು ನಿಲಯದ ಉಳಿದ ಸಿಬ್ಬಂದಿಯ ಮೇಲೆ ರೋಫು ಹಾಕುವ ಲಲನಾಮಣಿಯರನ್ನು ನೋಡಿದ್ದೇನೆ. ಕಾರ್ಯಕ್ರಮ ನೀಡಲು ಬರುವ ಪ್ರಾಯದ ಹುಡುಗಿಯರನ್ನು ನೋಡಿ ಜೊಲ್ಲುಸುರಿಸುವ, ಅವರ ಹಿಂದೆ ಮುಂದೆ ಓಡಾಡುವ ಈ ನಿಲಯದ ಕಂಬಗಳು ತಾವೆಂದು ಪ್ರದರ್ಶಿಸುವ ಗೆಳೆಯರೂ ಇಲ್ಲದೆ ಇಲ್ಲ. ತಮ್ಮ ಆಪ್ತರು ಸಿದ್ಧಪಡಿಸಿದ ಜುಜುಬಿ ಕಾರ್ಯಕ್ರಮಗಳನ್ನು ಮೌಲಿಕ ಎಂದು ಹೊಗಳಿ, ತಮಗಾಗದ ನಿಲಯದ ಬೇರೆ ಅಧಿಕಾರಿಗಳು ಸಿದ್ಧಪಡಿಸಿದ ಕಳಪೆ, ಕಾರ್ಯಕ್ರಮ ಹಣ ಮತ್ತು ಸಮಯದ ಅಪವ್ಯಯ ಎಂದು ಮೀಟಿಂಗ್‌ಗಳಲ್ಲಿ ಕಿರುಚಾಡುವ, ಕಚ್ಚಾಡುವ, ಲಾಬಿ ನಡೆಸುವ ಜನರನ್ನು ನಾನು ಗಮನಿಸಿದ್ದೇನೆ.

ತಾವು ದೊಡ್ಡವರೆಂದು ತಿಳಿದ ಕಾರ್ಯಕ್ರಮಾಧಿಕಾರಿಗಳು, ಕಾರ್ಯಕ್ರಮ ಉತ್ಪಾದಕರು, ಕಲಾವಿದರು ಹಾಗೂ ಮತ್ತಿತರರು ಕಾರ್ಯಕ್ರಮದ ಧ್ವನಿಮುದ್ರಣಕ್ಕೆ ಬಂದವರನ್ನು ಹೇಗೆ ನಡೆಸಿಕೊಳ್ಳುತ್ತಾರೆಂಬುದನ್ನು ಕಂಡು ಬೇಸರಪಟ್ಟಿದ್ದೇನೆ. ದೊಡ್ಡಮನುಷ್ಯರಿಗೆ **Red carpet treatment**. ನಮ್ಮ ಜಿಲ್ಲೆಯ ಮಹಾನ್ ಸಾಹಿತಿ, ಕಲಾವಿದ, ವಿಚಾರಜೀವಿ, ಯಕ್ಷಗಾನತಜ್ಞ ಹೀಗೆ 'ಸ್ವಸ್ಥ ಮನಸಿನ ಸಾವಿರ ಮುಖ, ವುಳ್ಳವರನ್ನು ಆಕಾಶವಾಣಿಯ ಪ್ರಧಾನ ಬಾಗಿಲಲ್ಲೇ ಸ್ವಾಗತಿಸಲು ಓಡು ತ್ತಿದ್ದ ಕಾರ್ಯಕ್ರಮಾಧಿಕಾರಿಗಳನ್ನು ಬಲ್ಲೆನಾನು. ಬಾನುಲಿಯ ಸ್ಟುಡಿಯೋಗಳಲ್ಲಿ ಯಾರೂ ಧೂಮಪಾನ ಮಾಡುವಂತಿಲ್ಲ ಇದು ಕಟ್ಟಾಜ್ಞೆ. ಆದರೆ ಮಹಾನ್ ಸಾಹಿತಿ ಗಳು, ಬಹು ದೊಡ್ಡವರು ಸೇದಿದರೆ ಕೂಡದು ಅನ್ನುವ ಧೈರ್ಯ ಒಬ್ಬರಿಗೂ ಇಲ್ಲ.

ಆದರೆ ಸಾಮಾನ್ಯಜನ ಧ್ವನಿಮುದ್ರಣಕ್ಕೆ ಬಂದರೆ ಗಂಟೆಗಟ್ಟಲೆ ಕಾಯಬೇಕು. ಸ್ಟುಡಿಯೊ ಖಾಲಿ ಇಲ್ಲವಾದರೆ ರಿಹರ್ಸಲ್ ಮಾಡಿ ಎಂಬ ಔದಾರ್ಯ. ಖಾಲಿಯಿದ್ದರೆ ಯಾವ ರಿಹರ್ಸಲ್ ಇಲ್ಲ. ಕೆಲವೊಮ್ಮೆ ಸ್ಟುಡಿಯೊಗಳಿಗಾಗಿ ಅವರವರಲ್ಲಿ ಕಚ್ಚಾಟ ಭಾಷಣಕಾರರನ್ನು ಸ್ಟುಡಿಯೊದೊಳಗೆ ಕೂಡಿ ಹಾಕಿ ಎಲ್ಲಿಗೋ ಹೊರಟುಹೋಗಿ ಬಿಡುವುದುಂಟು. ಧ್ವನಿಮುದ್ರಣ ಮುಗಿದರೂ ಸಂಭಾವನೆಯ ಚೆಕ್ ಸಿದ್ಧ ವಾಗಿರುವುದಿಲ್ಲ. ಅದಕ್ಕೆ ಮತ್ತೊಂದು ಗಂಟೆ ಕಾಯಲೇಬೇಕು. ಕಾದುಕಾದು

ಕೋಸಿ ಬಿಸಿಯಾಗಿ ಮಾತಾಡಿದರೆ ಮುಂದಿನ ಸಲ ಕಾರ್ಯಕ್ರಮದ contract ಬರುವುದೇ ಇಲ್ಲ. ಹೀಗಾಗಿ ಅನೇಕರು ತಮಗೆ ಅಪಮಾನವಾದರೂ ಅಧಿಕಾರಿಗಳ ಮುಖಸ್ತುತಿ ಮಾಡಿ ಮುಂದಿನ ಕಾಂಟ್ರಾಕ್ಟ್ ಗಿಟ್ಟಿಸಿಕೊಳ್ಳುತ್ತಾರೆ. ಮಂಗಳೂರು ಆಕಾಶವಾಣಿಯ ಒಂದೆರಡು ವಿಭಾಗಗಳಂತೂ ಕೆಲವು ವ್ಯಕ್ತಿಗಳಿಗೆ ತುಂಬ ನಿಖರವಾಗಿ ಪ್ರತಿ ಮೂರು ತಿಂಗಳಿಗೊಮ್ಮೆ ಭಾಷಣದ ಕಾಂಟ್ರಾಕ್ಟ್ ಕೊಡುತ್ತಿವೆ !

ಬಾನುಲಿಯ ಮೂಲಕ ಪ್ರಸಾರವಾಗುವ "ಪತ್ರೋತ್ತರ" "ನಾವು ಮತ್ತು ನಮ್ಮವರು" ಅಪ್ಪಟ ಮೋಸದ, ಕ್ಷುಲ್ಲಕ ರಾಜಕೀಯ ಕಾರ್ಯಕ್ರಮ. ಶ್ರೋತೃಗಳ ಪತ್ರ ತುಂಬ ಖಾರವಾಗಿದ್ದರೆ ಒಂದೋ ಆ ಪತ್ರಗಳನ್ನು ತಿರಸ್ಕರಿಸಲಾಗುತ್ತದೆ ಇಲ್ಲವೆ ಆ ಪತ್ರಗಳ ಸಾರ ಮಾತ್ರ ಸ್ವೀಕರಿಸಿ ವಿಷಯ ತಿರುಗಿಸಿ ಉತ್ತರ ಕೊಡಲಾಗುತ್ತದೆ. ಒಬ್ಬ ತೃತೀಯ ದರ್ಜೆ ರಾಜಕಾರಣಿಯ ಉತ್ತರದ ಧಾಟಿ, ಧೋರಣೆ ಈ ಕಾರ್ಯಕ್ರಮದಲ್ಲಿ ಪ್ರತಿಬಿಂಬಿತವಾಗುತ್ತದೆ. "ನೋಡೋಣ, ಪರಿಶೀಲಿಸಲಾಗುವುದು, ಯೋಚನೆ ಮಾಡುತ್ತೇವೆ," "ನಮ್ಮ ಗಮನದಲ್ಲಿದೆ" ಎಂದು ಸ್ವಾಮೀಜಿ, ರಾಜಕಾರಣಿಗಳು, ಪವಾಡ ಪುರುಷರಂತೆ ಮಾತಾಡುತ್ತಾರೆ ಈ ಕಾರ್ಯಕ್ರಮದ ನಿರ್ಮಾತೃಗಳು. ಹೀಗೆ ಬಾನುಲಿಯ ಒಳಪ್ರವೇಶಿಸಿ ಕೆಲಕಾಲ ಅಲ್ಲಿದ್ದಾಗ ನನ್ನ ಎಲ್ಲ ಭ್ರಮೆಗಳು ಒಂದೊಂದಾಗಿ ಕಳಚುತ್ತ ಬಂದವು. ಅಧ್ಯಾಪಕನಾಗಿದ್ದಾಗ ನನಗಿದ್ದ ಸ್ವಾತಂತ್ರ್ಯಕ್ಕೂ ಇಲ್ಲಿ ನಾನು ಅನುಭವಿಸಬೇಕಾದ ಸಹಕಾರದ ಸೋಗು ಹೊತ್ತ ದಾಸ್ಯ–ನಿಯಂತ್ರಣಕ್ಕೂ ಇರುವ ಅಂತರ ಅರಿವಾಗುತ್ತಾ ಹೋಯಿತು. ಜಗತ್ತಿಗೆ ತತ್ವಬೋಧೆ ಮಾಡುವ, ಸ್ನೇಹ, ಪ್ರೇಮ, ಸಹಕಾರ, ಅಹಿಂಸೆ, ಏಕತೆ ಇತ್ಯಾದಿ ಕುರಿತು ದೊಡ್ಡ ದೊಡ್ಡ ಮಾತಾಡುವ ಬಾನುಲಿ ಪ್ರಪಂಚ ತುಂಬ ಕ್ಷುದ್ರವೂ, ಕ್ಷುಲ್ಲಕವೂ ಆಗಿ ಕಂಡಿತು. ಎಂದು ಬಾನುಲಿಯಿಂದ ಹೊರಬಂದು ಶಿಕ್ಷಕನಾಗಿ ಮತ್ತೆ ದುಡಿಯುತ್ತೇನೋ, ನಾನು ಓದಿದ್ದನ್ನು, ತಿಳಿದಿದ್ದನ್ನು ಯಾವ ಎಗ್ಗು ಇಲ್ಲದೆ ದಮನಕ್ಕೆ ಒಳಗಾಗದೆ ಹೇಳುತ್ತೇನೋ ಅನ್ನಿಸಿತು. 1982 ಜುಲೈ 14 ರಂದು ಬಾನುಲಿಯ "ಪ್ರಸಾರಾಧಿಕಾರಿ" ಎಂಬ ದೊಡ್ಡ ಹೆಸರಿನ ತೃತೀಯ ದರ್ಜೆಯ ಗುಮಾಸ್ತನ ಹುದ್ದೆಗಿಂತಲೂ ಕಡೆಯಾದ ಕೆಲಸಕ್ಕೆ ನಮಸ್ಕಾರ ಹೇಳಿದೆ. ಈಗ ನಾನೊರ್ವ ಪ್ರಶಿಕ್ಷಕ! ಬಾನುಲಿಯ ಗ್ಲಾಮರನ್ನು ಕಳಚಿಕೊಂಡ ಸಾಮಾನ್ಯ ನಿರೀಕ್ಷಕ.

ನಾನು ಬಾನುಲಿ ಸೇರಿದ ಮೇಲೆ ಮತ್ತು ಬಿಟ್ಟನಂತರ ನನ್ನ ಬಂಧು ಬಾಂಧವರ, ಗೆಳೆಯರ ಪ್ರತಿಕ್ರಿಯೆಗಳನ್ನು ಗಮನಿಸಿದ್ದೇನೆ. ಬಾನುಲಿ ಸೇರಿದಾಗ ನಾನು ಇದ್ದಕ್ಕಿದ್ದಂತೆ ದೊಡ್ಡವನಾದೆ ಅವರ ಕಣ್ಣಲ್ಲಿ. ಎಲ್ಲರೂ ಮುತ್ತಿಕೊಂಡು

ಮಾತಾಡಿಸುವವರೆ; ಗೌರವಿಸುವವರೆ. ಬಾನುಲಿಯಬಗ್ಗೆ ಪ್ರಶ್ನೆಗಳೇನು? ನನ್ನ ಕೆಲಸದ ಬಗ್ಗೆ ಕೇಳುವುದೇನು ? ಹೆಚ್ಚು ಕಡಿಮೆ ನಾನೊರ್ವ ಸಿನಿಮಾ ಸ್ಟಾರ್ ಆಗಿದ್ದೆ ಎನ್ನಬೇಕು. ಆದರೆ ನಾನು ಬಿ.ಎಡ್. ಕಾಲೇಜು ಉಪನ್ಯಾಸಕ ಆದಷ್ಟೇ ತಡ ಅನೇಕರು ಹುಬ್ಬೇರಿಸಿದರು. ಬಂಧು ಬಾಂಧವರಲ್ಲಿ ನನ್ನ ಬಗ್ಗೆ ಇದ್ದ ಗೌರವ ಕಿಂಚಿತ್ ಕಡಿಮೆಯಾಯಿತು. ಸ್ಟಾರ್ ವ್ಯಾಲ್ಯೂ ಕಡಿಮೆ ಆದದ್ದರಬಗ್ಗೆ ನಾನು ತಲೆಕೆಡಿಸಿ ಕೊಂಡಿಲ್ಲ. ಸಾಮಾಜಿಕ ಅಂತಸ್ತು, ಹಣದ ಮಾಪನದಿಂದ ವ್ಯಕ್ತಿಯನ್ನು ಅಳೆಯುವ, ಗೌರವಿಸುವ ಜನರ ಆಲೋಚನಾಕ್ರಮದ ಕುರಿತು ಕಿಂಚಿತ್ ವ್ಯಥೆಯೆನಿಸಿತು.

ನಮ್ಮ ಜಿಲ್ಲೆಯ ಮಹಾನ್ ವಾಚಸ್ಪತಿಗಳು ಭಾರತೀಯ ಸಂಸ್ಕೃತಿಯ ಪುನರುತ್ಥಾನವಾದಿಗಳು ನಮ್ಮ ಕಾಲೇಜಿಗೆ ಭಾಷಣ ಕುಟ್ಟಲು ಬರುವುದುಂಟು. ಹಾಗೆ ಬರೆದಾಗಲೆಲ್ಲ ಅವರು ಯಾವ ವಿಷಯದ ಬಗ್ಗೆಯೇ ಮಾತಾಡಲಿ, ನಾನಂತೂ ಒಂದು ವಿಚಾರದ ಕುರಿತು ಅವರಿಗೆ ಸ್ಫೂರ್ತಿಯ ಕೇಂದ್ರವಾಗುತ್ತೇನೆ. ಅಧ್ಯಾಪಕ ವೃತ್ತಿಯಲ್ಲಿದ್ದಾಗ ಬೇರೆವೃತ್ತಿಗೆ ಹೋದಾಗ ಅದು ಪ್ರಯೋಜನವಿಲ್ಲ ಎಂದು ಹಳಹಳಿಸಿ ಮತ್ತೆ ಮೊದಲಿನದಕ್ಕೆ ಬರುವುದು ಕೆಲವರ ಪ್ರವೃತ್ತಿ. ಮನುಷ್ಯ ತಾನಿರುವಲ್ಲಿ ತೃಪ್ತಿ ಕಾಣಬೇಕು. ಮನಸ್ಸೇ ನಮ್ಮ ತೃಪ್ತಿ, ಅತೃಪ್ತಿಗಳಿಗೆ ಕಾರಣ. "ಮನಯೇವ ಬಂಧಮನುಷ್ಯಾಣಾಂ ಮೋಕ್ಷಯೋ ಕಾರಣಂ' ಎಂದು ನನ್ನೆಡೆಗೆ ಕಿರುನೋಟ ಬೀರುತ್ತಾ ವಿದ್ಯಾರ್ಥಿಗಳಿಗೆ ಉಪದೇಶಿಸುತ್ತಾರೆ. ಒಂದು ಹೊಸ ಅನುಭವ ಹಿತವಾದರೆ ಉಳಿಯೋಣ, ಇಲ್ಲವಾದರೆ ಬೇರೆಡೆಗೆ ಹೋಗೋಣ ಎಂದು ನಾನು ತಿಳಿದವನು. ಆದರೆ ಬಾನುಲಿಯ ಎರಡು ವರ್ಷಕ್ಕೂ ಮಿಗಿಲಾದ ಸೇವಾವಧಿಯಲ್ಲಿ ಉಂಟಾದಷ್ಟು ಅತೃಪ್ತಿ, ಅಸಮಾಧಾನ, ಜಿಗುಪ್ಸೆ ಖಂಡಿತ ಶಿಕ್ಷಕನಾಗಿದ್ದಾಗ ನನಗೆ ಉಂಟಾಗಲಿಲ್ಲ. ಸಣ್ಣ ಪುಟ್ಟ ಮನಃಕ್ಲೇಶಗಳನ್ನು ಬಿಟ್ಟರೆ, ನಾನು ಯಾವಾಗಲೂ ಬೋಧನೆಯನ್ನು, ವಿದ್ಯಾರ್ಥಿಗಳನ್ನು, ವಿದ್ಯಾರ್ಥಿಗಳೊಂದಿಗೆ ಬೆರೆಯುವುದನ್ನು, ಸಹಪಠ್ಯ ಚಟುವಟಿಕೆ ಗಳನ್ನು ಇಷ್ಟಪಡುವವನು. ಈಗ ನಾನು ನಿಜವಾಗಿಯೂ ಬಾನುಲಿಯಲ್ಲಿ ಇದ್ದದ್ದ ಕ್ಕಿಂತ ಹೆಚ್ಚು ಸುಖಿಯಾಗಿದ್ದೇನೆ ; ಹೆಚ್ಚು ಸ್ವತಂತ್ರವಾತಾವರಣದಲ್ಲಿ ಉಡುಪಿಯ ವಿಚಾರವಂತ ಗೆಳೆಯರ ನಡುವೆ ಉಸಿರಾಡುತ್ತಿದ್ದೇನೆ ಎಂಬ ಸಮಾಧಾನ ನನಗಿದೆ.

ಬಾನುಲಿಯಲ್ಲಿ ನಾನು ಕಂಡ ಕ್ಷುದ್ರತೆ ಶಿಕ್ಷಣ ಕ್ಷೇತ್ರದಲ್ಲಿ ಇಲ್ಲ ಎಂಬುದು ನನ್ನ ಮಾತಿನ ಸಾರವಲ್ಲ. ಶಿಕ್ಷಣ ಕಾಲೇಜು ಕೂಡಾ ಕೆಲವು ವಿಷಯಗಳಲ್ಲಿ ಸಣ್ಣ ಹೈಸ್ಕೂಲಿಗಿಂತಲೂ ಕಳಪೆಯಾಗಿರುತ್ತದೆಂಬುದು ನನಗೆ ತಿಳಿದಿದೆ. ಇಲ್ಲಿಯೂ ಹೊಟ್ಟೆಕಿಚ್ಚು, ರಂಪ, ಪ್ರಜಾಪ್ರಭುತ್ವದ ಸೋಗು ಇದೆ. ಆದರೆ ಯಾವುದನ್ನು ತಲೆಯಮೇಲಿಟ್ಟು ಕುಣಿದಾಡಬೇಕಾದ ವಸ್ತು ಎಂದು ಭಾವಿಸುತ್ತೇವೋ ಅಂಥ ಸಂಸ್ಥೆಯ, ವ್ಯಕ್ತಿಯ ಒಳಹೊಕ್ಕು ನೋಡಿದಾಗಲೆ ನಮ್ಮ ಭ್ರಮೆಗಳು ಕಳಚಿ ಸತ್ಯ ದರ್ಶನ ಆಗುತ್ತದಲ್ಲವೇ ?

# ಪುರಾತನ ಭಾರತದಲ್ಲಿ ವಿಜ್ಞಾನ

–ಸಿ. ಯತಿರಾಜು

---

ಪ್ರಾಚೀನ ವಿಜ್ಞಾನದ ಬಗ್ಗೆ ನಾವು ಎರಡು ರೀತಿಯ ವಾದಗಳನ್ನು ಕೇಳುತ್ತೇವೆ. ಒಂದು ವಾದದ ಪ್ರಕಾರ ಪ್ರಾಚೀನ ವಿಜ್ಞಾನ ಬಹಳ ಮುಂದುವರಿದಿತ್ತು. ಅದು ಪ್ರಪಂಚದ ವಿವಿಧ ಭಾಗಗಳ ಬೆಳವಣಿಗೆಗಿಂತ ತುಂಬಾ ಮುಂದಿತ್ತು. ಇದು ಭಾವನಾತ್ಮಕ ಶ್ರೇಷ್ಠತೆಯ ವಾದ. ಇದಕ್ಕೆ ವಿರುದ್ಧವಾಗಿ ಪಾಶ್ಚಿಮಾತ್ಯ ಪ್ರಭಾವ ಕ್ಕೊಳಗಾದ ಭಾರತೀಯ ವಿಜ್ಞಾನವನ್ನು ಮೂಗು ಮುರಿಯುವ ವಾದವನ್ನು ನಾವು ಕೇಳುತ್ತೇವೆ. ಇದರ ಪ್ರಕಾರ ಭಾರತದಲ್ಲಿ ವಿಜ್ಞಾನ ಎನ್ನುವುದು ಇರಲೇ ಇಲ್ಲ ಅಲ್ಲಿರುವುದು ಬರೀಧಾರ್ಮಿಕ ಗ್ರಂಥಗಳ ಅಲೌಕಿಕವಾದದ ಕಂತೆ ಪುರಾಣ. ಈ ಗ್ರಂಥಗಳಲ್ಲೆಲ್ಲಾ ಅವೈಜ್ಞಾನಿಕ ತತ್ವಗಳು ತುಂಬಿವೆ ಎಂಬ ನಕಾರಾತ್ಮಕ ವಾದವನ್ನು ನಾವು ಕೇಳುತ್ತೇವೆ. ಆದರೆ ಈ ಎರಡೂ ಅಭಿಪ್ರಾಯಗಳು ಪೂರ್ವಾಗ್ರಹ ಪೀಡಿತವಾಗಿವೆ. ಒಂದು ನಮ್ಮ ಪರಂಪರೆಯ ಬಗ್ಗೆ ತುಂಬಾ ಭಾವುಕ ವಾಗಿ ಯೋಚಿಸುವುದರಿಂದ ಬಂದಿದ್ದಾದರೆ ಮತ್ತೊಂದು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಅದನ್ನು ಶ್ರೇಷ್ಠವೆಂಮ ಭ್ರಮಿಸಿ ನಮ್ಮ ಹಿಂದಿನದೆಲ್ಲವನ್ನೂ ಹೀಗಳೆಯುವ ಹಾಗೂ ತಿರಿಸ್ಕರಿಸುವ ಮನೋಭಾವದಿಂದುಟಾದುದು.

ಪ್ರಾಚೀನ ಭಾರತೀಯ ವ್ಯವಸ್ಥೆಯಲ್ಲಿ ನಾವು ವಿಜ್ಞಾನದ ಬೇರುಗಳನ್ನು ಹುಡುಕ ಹೊರಟರೆ ನಮಗೆ ಪ್ರಮುಖವಾಗಿ ಕಾಣುವ ವಿಭಾಗ ವೈದ್ಯಶಾಸ್ತ್ರ ಅಥವಾ ಆಯುರ್ವೇದ ಬೇರೆ ಬೇರೆ ವಿಭಾಗಗಳಲ್ಲಿ ಈ ಬೇರುಗಳು ಕಂಡು ಬಂದರೂ ಅವುಗಳಲ್ಲಿ ವಿಜ್ಞಾನದ ತತ್ವಗಳು ಇದರಷ್ಟು ಹಾಸು ಹೊಕ್ಕಾಗಿಲ್ಲ-ಬಹಳ ಸಂದರ್ಭಗಳಲ್ಲಿ ಅವು ಆಧ್ಯಾತ್ಮವಾದದ ಕಡೆ ವಾಲಿ ಮೂಲ ಚರ್ಚೆಯಿಂದ

ವಿಮುಖವಾಗುತ್ತದೆ. ಆದ್ದರಿಂದ ಪುರಾತನ ಭಾರತದಲ್ಲಿ ವಿಜ್ಞಾನವನ್ನು ಕುರಿತು ಮಾತನಾಡುವಾಗ ಆಯುರ್ವೇದವೆ ನಮ್ಮ ಹೆಚ್ಚಿನ ಗಮನವನ್ನು ಸೆಳೆಯುತ್ತದೆ.

ಆಯುರ್ವೇದಕ್ಕೆ ಅನೇಕ ಆಕರ ಗ್ರಥಗಳಿವೆ. ಅವುಗಳಲ್ಲಿ ಚರಕ ಸಂಹಿತಾ, ಸುಶ್ರೂತ ಸಂಹಿತಾ, ಅಷ್ಟಾಂಗ ಸಂಗ್ರಹ ಬಹಳ ಪ್ರಮುಖವಾಗಿವೆ. ಈ ಆಕರ ಗ್ರಥಗಳನ್ನು 'ವೃದ್ಧತ್ರಯಿ' ಎಂದು ಕರೆಯುತ್ತಾರೆ. ಇವುಗಳಲ್ಲದೆ ಬೇಲಾ ಸಂಹಿತಾ, ಕಾಶ್ಯಪ ಸಂಹಿತಾ, ಹರೀತಾ ಸಂಹಿತಾ ಮುಂತಾದವು ಕೂಡ ಇವೆ. ಆದರೆ ಈ ಆಕರ ಗ್ರಥಗಳಲ್ಲೆಲ್ಲಾ ಚರಕ ಸಂಹಿತ ಬಹಳ ಪ್ರಮುಖವಾದದ್ದು. ಇದು 120 ಅಧ್ಯಾಯ ಗಳನ್ನು ಹೊಂದಿದ್ದು 8 ಸಂಪುಟಗಳಲ್ಲಿ ನಮಗೆ ಲಭ್ಯವಿದೆ. ಇದರ ರಚನಾಕಾಲ ವನ್ನು ನಿರ್ದಿಷ್ಟಗೊಳಿಸಲು ಸಾಧ್ಯವಿಲ್ಲ. ಈ ಗ್ರಂಥದ ಕಾಲವನ್ನು ಕ್ರಿ.ಪೂ. 6ನೇ ಶತಮಾನದಿಂದ ಕ್ರಿ.ಶ 1ನೇ ಶತಮಾನದವರೆಗೆ ಎಳೆದಾಡುತ್ತಾರೆ. ಈ ಗ್ರಂಥದ ಮೂಲಕರ್ತೃವಿನ ಬಗ್ಗೆಯೂ ಖಚಿತವಾದ ಅಭಿಪ್ರಾಯವಿಲ್ಲ. ಅದರ ಶೈಲಿ ಹಾಗೂ ನಿರೂಪಣಾವಿಧಾನವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಚರಕ ಸಂಹಿತೆಯ ಕರ್ತೃ ಒಬ್ಬನಾಗಿರದೆ ಅನೇಕರಿರಬೇಕೆಂಬ ಅನುಮಾನ ಬರುತ್ತದೆ. ಇನ್ನು ಈ ಗ್ರಂಥದ ಹೆಸರನ್ನು ಗಮನಿಸಿದಾಗ 'ಚರಕ' ಎನ್ನುವ ಪದವನ್ನು ನಾವು ನಾಮಸೂಚಕವೆಂದು ಪರಿಗಣಿಸುವುದು ತುಂಬಾ ತಪ್ಪಾಗುತ್ತದೆ. ಇದನ್ನು ನಾವು ಉಪಾಧಿ ಅಥವಾ ಸಾರ್ಥಕನಾಮವೆಂದು ಪರಿಗಣಿಸುವುದು ಹೆಚ್ಚು ಸೂಕ್ತವಾಗಿ ಕಾಣುತ್ತದೆ. ಚರಕ ಸಂಹಿತೆಯ ಶೈಲಿಯಲ್ಲಿನ ವೈವಿಧ್ಯ ಮತ್ತು ಅದರಲ್ಲಿನ ಸಂಕೀರ್ಣತೆಗಳು ಈ ವಾದಕ್ಕೆಹೆಚ್ಚು ಪುಷ್ಟಿ ನೀಡುತ್ತವೆ. ಇಂದು ನಮಗೆ ದೊರೆತಿರುವ ಚರಕ ಸಂಹಿತೆ ಅನೇಕ ಕೈಬದಲಾವಣೆ ಹೊಂದಿದೆ. ಅನೇಕ ವಿಷಯಗಳು ತೊಡೆದುಹಾಕಲ್ಪಟ್ಟು ಇನ್ನೂ ಅನೇಕ ವಿಷಯಗಳು ಅದಕ್ಕೆ ಸೇರ್ಪಡೆ ಯಾಗಿರುವುದನ್ನು ನಾವು ಗಮನಿಸ ಬಹುದು.

ಪ್ರಾರಂಭಿಕ ಹಂತಗಳಲ್ಲಿ ವಿಜ್ಞಾನದ ಬೆಳವಣಿಗೆ ತುಂಬಾ ಸೃಜನಾತ್ಮಕ ವಾಗಿತ್ತು. ಅದು ಮಂತ್ರ ಧಾರ್ಮಿಕ ಚಿಕಿತ್ಸೆಯಿಂದ ವಿಚಾರಯುಕ್ತ ಚಿಕಿತ್ಸೆಗೆ ಬೆಳವಣಿಗೆ ಹೊಂದುವ ಕಾಲ ಘಟ್ಟ. "ದೈವ ವ್ಯಾಪಾರಸ್ಯ ಬೇಷಜ"ದಿಂದ ಯುಕ್ತಿ ವ್ಯಾಪಾರಸ್ಯ ಬೇಷಜ"ದ ವರೆಗಿನ ಬೆಳವಣಿಗೆ ತುಂಭಾ ಪ್ರಮುಖವಾದದ್ದು. ಈ ಕಾಲಘಟ್ಟದಲ್ಲಿ ಆಯುರ್ವೇದ ಪ್ರಯೋಗವಾದಿ ಸಿದ್ಧಾಂತಗಳಿಗೆ ಹಾಗೂ ಅನು ಭವಾತ್ಮಕ ಸಿದ್ಧಾಂತಗಳಿಗೆ ಹೆಚ್ಚು ಒತ್ತು ಕೊಟ್ಟಿತು. "ಪ್ರತ್ಯಕ್ಷ ಫಲಾದರ್ಶನಾತ್" ಪ್ರಯೋಗದ ಪರಿವೀಕ್ಷಣೆಗಳನ್ನು ಆಚರಣೆಯ ಒರೆಗಲ್ಲಿಗೆ ಹಚ್ಚಿದ ನಂತರ ಸಿದ್ಧಾಂತ ಗಳೆಂದು ಪರಿಗಣಿಸುತ್ತಿದ್ದರು. ಆಯುರ್ವೇದದಲ್ಲಿ ನೇರ ವೀಕ್ಷಣೆಗೆ ಅತ್ಯಂತ ಹೆಚ್ಚಿನ

ಒತ್ತನ್ನು ನೀಡುತ್ತಿದ್ದರು. ವೀಕ್ಷಿಸಿದ್ದನ್ನು ಮಾತ್ರ ನಂಬುವುದಲ್ಲದೆ ವಿವಿಧ ವೀಕ್ಷಣೆ ಗಳಲ್ಲಿನ ಸಾಮಾನ್ಯ ಎಳೆಗಳನ್ನು ಗುರುತಿಸಿ ಅದನ್ನು ಸಾಮಾನ್ಯೀಕರಿಸಿ ಸಿದ್ಧಾಂತ ಗಳನ್ನಾಗಿ ಮಾಡುತ್ತಿದ್ದರು. ಅವರು ಈ ವೀಕ್ಷಣೆಗೆ ತಮ್ಮ ಪಂಚೇಂದ್ರಿಯಗಳನ್ನೇ ತೊಡಗಿಸಿ ಅವು ಹೆಚ್ಚು ಹೆಚ್ಚು ಗ್ರಹಣಶೀಲವಾಗುವಂತೆ ಮಾಡಿಕೊಂಡಿದ್ದರು.

"ಸರ್ವಂ ದ್ರವ್ಯಂ ಪಂಚಭೂತಾತ್ಮಕಂ" ಎಲ್ಲ ವಸ್ತುಗಳೂ ಪಂಚಭೂತಗಳಿಂದ ಮಾಡಲ್ಪಟ್ಟಿವೆ. ವಸ್ತುಗಳು ರೂಪಾಂತರ ಹೊಂದುವುದು ಅವುಗಳ ಸ್ವಭಾವ, ಅವುಗಳು ನಿರಂತರವಾದ ಬದಲಾವಣೆಯ ಸುಳಿಯಲ್ಲಿವೆ ಎಂದು ಆಯುರ್ವೇದ ಹೇಳುತ್ತದೆ. ವಸ್ತುಗಳ ಗುಣವಿಶೇಷಗಳು ಅವುಗಳ ಸ್ವಭಾವದಿಂದ ಬರುತ್ತವೆ ಎನ್ನುವ ಸ್ವಭಾವ ವಾದವನ್ನು ಅವರು ಮಂಡಿಸಿದರು. 'ಪುರುಷ' ಎಂದರೆ ಮನುಷ್ಯ ದೇಹವೂ ಸಹ ಪಂಚಭೂತಗಳಿಂದಾಗಿದೆ. ಈ ಪುರುಷನೂ ಸಹ ನಿರಂತರವಾದ ಬದಲಾವಣೆಯ ಹಾದಿಯಲ್ಲಿದ್ದಾನೆ. ಪಂಚಭೂತಗಳಿಂದ ಮಾಡಲ್ಪಟ್ಟ ದೇಹ ಸಾವಿನ ನಂತರ ಪುನಃ ಅದೇ ಪಂಚಭೂತಗಳಾಗಿ ವಿಘಟನೆ ಹೊಂದುತ್ತದೆಯಲ್ಲದೆ ಅದು ಬೇರೆಲ್ಲಿಗೂ ಹೋಗುವುದಿಲ್ಲವೆಂಬ ವಸ್ತು ನಿತ್ಯತೆಯ ನಿಯಮವನ್ನು ಸಾರುತ್ತದೆ.

ಆಯುರ್ವೇದ ಕಾರ್ಯಕಾರಣ ಸಂಬಂಧಕ್ಕೆ ಅತಿ ಹೆಚ್ಚಿನ ಆದ್ಯತೆ ನೀಡುತ್ತದೆ. ಪ್ರತಿ ವ್ಯಾಧಿಗೂ ಒಂದು ಕಾರಣವಿರಲೇಬೇಕು, ಹಾಗೂ ಗುಣಪಡಿಸಲು ಸಾಧ್ಯವಾದ ಎಲ್ಲಾ ಖಾಯಿಲೆಗಳನ್ನು ಗುಣಪಡಿಸಲು ಸಾಧ್ಯ. ವ್ಯಾಧಿ ಎಂಬುದು ದೇವರ ಕೋಪವೆಂದಾಗಲಿ, ಪೂರ್ವಜನ್ಮದ ಪಾಪದ ಫಲವೆಂದಾಗಲಿ ಅದು ಭಾವಿಸದೆ ಅದಕ್ಕೆ ಒಂದು ಭೌತಿಕ ಕಾರಣವಿರಲೇಬೇಕು ಎಂದು ಭಾವಿಸುತ್ತದೆ. ಹೀಗೆ ಅದು ವ್ಯಾಧಿಯನ್ನು ಯಾವುದೇ ಅಲೌಕಿಕ ಶಕ್ತಿಯ ಪ್ರಭಾವವೆಂಬುದನ್ನು ಸಂಪೂರ್ಣವಾಗಿ ತಿರಸ್ಕರಿಸುತ್ತದೆ. ಒಬ್ಬನು ಸೇವಿಸುವ ಆಹಾರ ಅವನ ಆರೋಗ್ಯವನ್ನು ನಿರ್ಧರಿಸು ತ್ತದೆ. "ಅಹಿತ ಆಹಾರ ಉಪಯೋಗಃ ಪುನಃ ವ್ಯಾಧಿ ನಿಮಿತ್ತಂ ಇತಿ". ಅಹಿತ ವಾದ ಆಹಾರ ಸೇವನೆಯಿಂದ ಅನಾರೋಗ್ಯ ಉಂಟಾಗುತ್ತದೆ. ಇದಲ್ಲದೆ ಆಯುರ್ವೇದ ವೈದ್ಯರಿಗೆ ತಮ್ಮ ಇತಿಮಿತಿಗಳ ಪೂರ್ಣ ಅರಿವಿತ್ತು. ಅವರು ಖಾಯಿಲೆ ಗಳನ್ನು ಗುಣಪಡಿಸಲು ಸಾಧ್ಯವಾದುವು ಮತ್ತು ಅಸಾಧ್ಯವಾದುವುಗಳೆಂದು ವಿಂಗಡಿಸಿ ದ್ದರು. ತಮ್ಮ ಅರಿವಿಗೆ ಮೀರಿದ ಕೆಲವು ಖಾಯಿಲೆಗಳನ್ನು ಅವರು ಗುಣಪಡಿಸಲು ಅಸಾಧ್ಯವಾದ ಖಾಯಿಲೆಗಳೆಂದು ವಿಭಾಗೀಕರಿಸಿದ್ದರು. ಗುಣಪಡಿಸಲು ಸಾಧ್ಯವಾದ

ಎಲ್ಲಾ ವ್ಯಾಧಿಗಳನ್ನು ಅವರು ಸೂಕ್ತ ಔಷಧಿ ಹಾಗೂ ಆಹಾರ ಪಥ್ಯಗಳಿಂದ ನಿವಾರಿಸುತ್ತಿದ್ದರು. ಹೀಗೆ ಅವರು ವ್ಯಾಧಿ ನಿವಾರಣೆಗೆ ಯಂತ್ರ ಮಂತ್ರಗಳ ಮೊರೆ ಹೋಗದೆ, ಭೌತ ವಸ್ತುಗಳ ಉಪಯೋಗಕ್ಕೆ ಹೆಚ್ಚು ಒತ್ತು ಕೊಟ್ಟಿದ್ದರು.

ಆಯುರ್ವೇದ ಚರ್ಚೆಗಳನ್ನು ಹೆಚ್ಚು ಹೆಚ್ಚು ಪ್ರೋತ್ಸಾಹಿಸುತ್ತಿತ್ತು. ಚರಕ ಸಂಹಿತೆಯಲ್ಲಿ ಅನೇಕ ಸಿದ್ಧಾಂತಿಗಳು ತಮ್ಮ ಚಿಕಿತ್ಸಾ ವಿಧಾನಗಳನ್ನು ವಾರ್ಷಿಕ ಸಮ್ಮೇಳನಗಳಲ್ಲಿ ಚರ್ಚೆಗಾಗಿ ಮಂಡಿಸುತ್ತಿದ್ದರೆಂದು ನಮಗೆ ಕಂಡುಬರುತ್ತದೆ. ಅಲ್ಲಿ ವಿವಿಧ ಚಿಕಿತ್ಸಾವಿಧಾನಗಳ ಮಂಡನೆ ಹಾಗೂ ಖಂಡನೆ ವ್ಯಾಪಕವಾಗಿ ನಡೆಯುತ್ತಿತ್ತು. ಅಭಿಪ್ರಾಯ ಬೇಧಗಳಿದ್ದರೂ ಸಹ ಅವರೆಲ್ಲರೂ ಅಂತ್ಯದಲ್ಲಿ ಒಂದು ಸರ್ವ ಸಮ್ಮತ ತೀರ್ಮಾನಕ್ಕೆ ಬರುತ್ತಿದ್ದರು. ಇಂತಹ ತೀರ್ಮಾನ ಸಕಾರಣವಾಗಿ ತಿರಸ್ಕರಿಸಲ್ಪಡುವವರೆಗೂ ಅದರ ಬಳಕೆ ವ್ಯಾಪಕವಾಗಿ ನಡೆಯುತ್ತಿತ್ತು. ಇಂತಹ ತೀರ್ಮಾನಗಳನ್ನು ಅವರು ಸರ್ವ ಸಂಗ್ರಹ ಸಿದ್ಧಾಂತ ಎಂದು ಕರೆಯುತ್ತಿದ್ದರು.

ಆಯುರ್ವೇದ ವಿವಿಧ ಜ್ಞಾನದ ಶಾಖೆಗಳೊಂದಿಗೆ ಸಾವಯವ ಸಂಬಂಧವನ್ನು ಹೊಂದಿತ್ತು.ಆಯುರ್ವೇದದ ಅಭ್ಯಾಸಿಗಳಿಗೆ ರಸಾಯನ ಶಾಸ್ತ್ರ, ಲೋಹಶಾಸ್ತ್ರ. ಭೂ ವಿಜ್ಞಾನ, ಪವನಶಾಸ್ತ್ರ, ಶರೀರ ಶಾಸ್ತ್ರ, ಪ್ರಾಣಿ ಶಾಸ್ತ್ರ ಮುಂತಾದ ವಿವಿಧ ಶಾಖೆಗಳ ಜ್ಞಾನ ತುಂಬಾ ಅವಶ್ಯಕವಾಗಿತ್ತು. ಚಿಕಿತ್ಸೆಗೆ ಬೇಕಾದ ಗಿಡಮೂಲಿಕೆ ಗಳನ್ನು ವೈಧ್ಯರೇ ಸಂಗ್ರಹಿಸಬೇಕಾಗುತ್ತಿತ್ತು. ಇದರಿಂದಾಗಿ ಅವರಿಗೆ ಸಸ್ಯ ಶಾಸ್ತ್ರ. ಪವನ ಶಾಸ್ತ್ರ, ಭೂ ವಿಜ್ಞಾನ ಮುಂತಾದವುಗಳ ಬಗ್ಗೆ ಹೆಚ್ಚಿನ ತಿಳುವಳಿಕೆ ಇರ ಬೇಕಾಗುತ್ತಿತ್ತು. ಹೀಗಾಗಿ ಆಯುರ್ವೇದದ ಅಭ್ಯಾಸ ಈ ಎಲ್ಲಾ ಶಾಖೆಗಳ ಅಭ್ಯಾಸವೂ ಕೂಡ ಆಗಿತ್ತು. ದೇಹರಚನಾಶಾಸ್ತ್ರದ ಸರಿಯಾದ ಜ್ಞಾನವಿಲ್ಲದೆ ಒಬ್ಬನು ಒಳ್ಳೆಯ ವೈದ್ಯನಾಗಲಾರ. ಹಾಗಾಗಿ ಶವ ಛೇದನ ಪ್ರತಿ ವೈದ್ಯನಿಗೂ ಕಡ್ಡಾಯವಾಗಿತ್ತು, ಈ ಶವ ಛೇದನಕ್ಕೆ ವೈದ್ಯನು ಜಿತಹಸ್ತನಾಗಿರಬೇಕು. ಶಸ್ತ್ರ ಚಿಕಿತ್ಸೆಮಾಡುವ ಪ್ರಯತ್ನದಲ್ಲಿ ವೈದ್ಯನು ಲೋಹಶಾಸ್ತ್ರದ ಪರಿಣತಿಯನ್ನು ಪಡೆಯಬೇಕಾಗುತ್ತಿತ್ತು. ವಿವಿಧ ಔಷಧಿಗಳನ್ನು ತಯಾರಿಸಲು ಅವನಿಗೆ ರಸಾಯನ ಶಾಸ್ತ್ರದ ಜ್ಞಾನವಿರಬೇಕಾಗುತ್ತಿತ್ತು. ಹೀಗೆ ಆಯುರ್ವೇದ ಒಂದು ಸಂಪೂರ್ಣ ವಿಜ್ಞಾನದ ರೀತಿಯಲ್ಲಿ ರೂಪುಗೊಳ್ಳುತ್ತಿತ್ತು.

ಆಯುರ್ವೇದ ವ್ಯಾಧಿ ನಿವಾರಣೆಗೆ 4 ಮುಖ್ಯ ಅಂಶಗಳನ್ನು ಪ್ರಮುಖವೆಂದು ಪರಿಗಣಿಸುತ್ತದೆ. ಅವು ಯಾವುವೆಂದರೆ ವೈದ್ಯ, ಔಷಧಿ ಮತ್ತು ಪಥ್ಯ, ಉಪಚಾರ ಹಾಗೂ ರೋಗಿ. ಹೀಗಾಗಿ ಅದು ವ್ಯಾಧಿ ನಿವಾರಣೆಗೆ ಯಾವುದೇ ಅಲೌಕಿಕ ಶಕ್ತಿಯ ಅವಶ್ಯಕತೆಯನ್ನು ಸೂಚಿಸುವುದಿಲ್ಲ. ಈ ನಾಲ್ಕು ಅಂಶಗಳ ಸಹಕಾರ ದಿಂದ ಗುಣಪಡಿಸಲು ಸಾಧ್ಯವಾದ ಎಲ್ಲಾ ವ್ಯಾಧಿಗಳನ್ನು ಗುಣಪಡಿಸಲು ಸಾಧ್ಯ ಎಂಬ ಬಲವಾದ ವಿಶ್ವಾಸವನ್ನು ಆಯುರ್ವೇದದ ವೈದ್ಯರು ಹೊಂದಿದ್ದರು.

ಆಯುರ್ವೇದ ಆದ್ಯತೆ ನೀಡಿದ ಮತ್ತೊಂದು ಅಂಶವೆಂದರೆ ಪರಿಸರ ವಸ್ತು ಮತ್ತು ದೇಹವಸ್ತುಗಳ ನಡುವಿನ ಕ್ರಿಯೆ. ಪರಿಸರದ ವಸ್ತುಗಳಾದ ಆಹಾರ, ಪಾನೀಯ, ಗಾಳಿ ಮುಂತಾದವುಗಳು ದೇಹದ ಮೇಲೆ ಯಾವ ರೀತಿಯ ಪರಿಣಾಮ ವನ್ನು ಉಂಟುಮಾಡುತ್ತವೆ ಎಂಬುದನ್ನು ವಿವರವಾಗಿ ಅಭ್ಯಸಿಸುತ್ತಿದ್ದರು. ವಾತಾ ವರಣದ ವಸ್ತುಗಳನ್ನು ಸೂಕ್ತ ಪ್ರಮಾಣದಲ್ಲಿ ತೆಗೆದುಕೊಂಡರೆ ಒಳ್ಳೆಯ ಆರೋಗ್ಯ ವಿರುತ್ತದೆ. ಈ ಸೂಕ್ತ ಪ್ರಮಾಣ ವ್ಯತ್ಯಾಸವಾದರೆ ಅನಾರೋಗ್ಯ ಉಂಟಾಗುತ್ತದೆ. ಆದ್ದರಿಂದ ಉತ್ತಮ ಆರೋಗ್ಯವೆನ್ನುವುದು ಸಮತೋಲನ ಆಹಾರ ತೆಗೆದು ಕೊಳ್ಳುವುದರಲ್ಲಿದೆ ಎಂದು ಅವರು ಭಾವಿಸಿದ್ದರು. ಸೇವಿಸುವ ಆಹಾರದಲ್ಲಿನ ಅಸಮ ತೋಲನವೆ ಅನಾರೋಗ್ಯಕ್ಕೆ ಕಾರಣ. ರೋಗವನ್ನು ಪತ್ತೆ ಹಚ್ಚುವುದೆಂದರೆ ಈ ಅಸಮತೋಲನವನ್ನು ಪತ್ತೆ ಹಚ್ಚುವುದೇ ಆಗಿದೆ. ಔಷಧಿ ಹಾಗೂ ಪಥ್ಯಗಳಿಂದ ಈ ಅಸಮತೋಲನವನ್ನು ಅವರು ಸರಿಪಡಿಸುತ್ತಿದ್ದರು. ಇದನ್ನು ವಿಪಾಕವೆಂದು ಕರೆಯುತ್ತಾರೆ.

ಒಬ್ಬ ಮನುಷ್ಯನು ತೆಗೆದುಕೊಳ್ಳುವ ಆಹಾರ ಅವನ ದೇಹರಚನೆಯನ್ನು ನಿರ್ಧರಿಸುತ್ತದೆ ಎಂದು ಆಯುರ್ವೇದ ವೈದ್ಯರು ನಂಬಿದ್ದರು. ದೇಹದ ಬೆಳವಣಿಗೆ ಮತ್ತು ಅವನತಿಗಳು ಪ್ರಕೃತಿಯ ವಸ್ತುಗಳನ್ನವಲಂಬಿಸಿದೆ. ಈ ಪ್ರಕೃತಿಯ ವಸ್ತು ಗಳಲ್ಲಿ ಆಹಾರ ಬಹಳ ಮುಖ್ಯವಾದದ್ದು. "ದೇಹೆಹಿ ಆಹಾರ ಸಂಭವಃ". ಸೂಕ್ತ ಪ್ರಮಾಣದಲ್ಲಿರುವ ಅಡಿಗೆ ವಸ್ತುಗಳನ್ನು ಒಂದು ಪಾತ್ರೆಯಲ್ಲಿ ಬೆರೆಸಿ ಕಾಯಿಸಿದಾಗ ಬೆಂಕಿ ಅದನ್ನು ತಿನ್ನಲು ಯೋಗ್ಯವಾದ ಆಹಾರವನ್ನಾಗಿ ಪರಿವರ್ತಿಸುತ್ತದೆ. ಅದೇ ರೀತಿ ನಮ್ಮ ದೇಹದಲ್ಲಿನ ಬೆಂಕಿ ಅಥವಾ ಶಾಖ ನಾವು ತೆಗೆದುಕೊಂಡ ಆಹಾರವನ್ನು ದೇಹ ಪೋಷಣೆಗೆ ಅವಶ್ಯಕವಾದ ರಸಗಳನ್ನಾಗಿ ಪರಿವರ್ತಿಸುತ್ತದೆ. "ದೇಹ ಅಗ್ನಿ

ಹೇತುಕ". ಅಂದರೆ ದೇಹದಲ್ಲಿನ ಬೆಂಕಿ ಆರೋಗ್ಯಕ್ಕೆ ಬಹಳ ಮುಖ್ಯ.

ಆಯುರ್ವೇದ ವೈದ್ಯರು ಯಾದೃಚ್ಛವಾದವನ್ನು ಸಂಪೂರ್ಣವಾಗಿ ತಿರಸ್ಕರಿಸುತ್ತಾರೆ. ಇವಲ್ಲದೆ ಅವರು ಕರ್ಮ ಸಿದ್ಧಾಂತ ಮತ್ತು ಅದೃಷ್ಟವಾದವನ್ನು ಸಂಪೂರ್ಣವಾಗಿ ತಿರಸ್ಕರಿಸುತ್ತಾರೆ. ಹೀಗಾಗಿ ನಾವು ಆಯುರ್ವೇದದಲ್ಲಿ ಆಧುನಿಕ ವಿಜ್ಞಾನದ, ವೈಜ್ಞಾನಿಕ ಮನೋಭಾವದ ಮೂಲ ಬೇರುಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಹೀಗೆಂದು ಹೇಳಿದ ಮಾತ್ರಕ್ಕೆ ಆಯುರ್ವೇದದಲ್ಲಿ ಅವೈಜ್ಞಾನಿಕವಾದ ಯಾವ ಅಂಶಗಳೂ ಇಲ್ಲವೆಂದಲ್ಲ. ಈ ವೈಜ್ಞಾನಿಕ ಅಂಶಗಳೊಂದಿಗೆ ಅನೇಕ ಅವೈಜ್ಞಾನಿಕ ಕಲ್ಪನೆಗಳನ್ನು ಕಸಿ ಮಾಡಿರುವುದನ್ನು ನಾವು ಕಾಣಬಹುದು. ಆಯುರ್ವೇದದ ಆಕರ ಗ್ರಂಥಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಈ ಅವೈಜ್ಞಾನಿಕ ಅಂಶಗಳು ಹೇಗೆ ವೈಜ್ಞಾನಿಕ ಅಂಶಗಳೊಂದಿಗೆ ತುಂಬಾ ಜಾಣ್ಮೆಯಿಂದ ಬೆಸೆಯಲ್ಪಟ್ಟಿವೆ ಎಂಬುದನ್ನು ನಾವು ಕಾಣುತ್ತೇವೆ.

ಶ್ರೇಣಿಕೃತ ವರ್ಣಾಶ್ರಮ ಸಾಮಾಜಿಕ ವ್ಯವಸ್ಥೆ ರೂಪುಗೊಳ್ಳುತ್ತಿದ್ದ ಕಾಲಘಟ್ಟದಲ್ಲಿ ಕೆಲವು ಅವೈಜ್ಞಾನಿಕ ಕಲ್ಪನೆಗಳು ಆಯುರ್ವೇದ ಆಕರ ಗ್ರಂಥಗಳಲ್ಲಿ ಸೇರ್ಪಡೆಯಾಗಿರಬೇಕು. ಈ ವ್ಯವಸ್ಥೆಯಲ್ಲಿ ಕರ್ಮ ಸಿದ್ಧಾಂತ, ಕಟ್ಟುಕಥೆ, ಮತಾಚರಣ ನಿಷ್ಠೆ, ಧರ್ಮ ಮುಂತಾದವುಗಳು ಪ್ರಮುಖವಾಗಿ ವೈಜ್ಞಾನಿಕ ಅಂಶಗಳು ಕ್ರಮೇಣ ಹಿಂದೆ ಸರಿದಿರುವುದನ್ನು ನಾವು ಕಾಣಬಹುದು. ಯಜುರ್ವೇದದಲ್ಲಿ ವೈದ್ಯರನ್ನು ಹೀನಾಯವಾಗಿ ಕಾಣುವುದು ಕಂಡುಬರುತ್ತದೆ. ವೈದ್ಯರನ್ನು ಪಂಚಮರೆಂದು ಕಾಣುವುದು, ಅವರ ಜೊತೆ ಸಾಮಾಜಿಕ ಸಂಬಂಧಗಳನ್ನು ಬಹಿಷ್ಕರಿಸಿರುವುದನ್ನು ನಾವು ಕಾಣುತ್ತೇವೆ. ವೈದ್ಯಾಭ್ಯಾಸ ತೀರ ಕೆಳವರ್ಗದವರಿಗೆ ಮಾತ್ರ ಸೀಮಿತವಾಗಿರಬೇಕೆಂದು ವಿಧಿಸಲಾಗಿದೆ. ವೈದ್ಯದೇವತೆಗಳಾದ ಅಶ್ವಿನಿಗಳನ್ನು ಅವರು ದೇವತೆಗಳಾದರೂ, ಕೀಳರಿಮೆಯಿಂದ ನೋಡುವುದನ್ನು ನಾವು ಕಾಣುತ್ತೇವೆ. ಅಥರ್ವ ವೇದದ ಒಂದು ಮುಖ್ಯ ವಿಷಯ ಔಷಧಿ, ಈ ಕಾರಣದಿಂದಾಗಿ ಅಥರ್ವ ವೇದವನ್ನು ಕೀಳಾಗಿ ನೋಡುವುದನ್ನು ನಾವು ಕಾಣುತ್ತೇವೆ.

ಆಯುರ್ವೇದದ ಆಕರ ಗ್ರಂಥಗಳಲ್ಲಿ ಹಸುವನ್ನು ಪ್ರಾಣಿಶಾಸ್ತ್ರದ ರೀತಿ ಅಭ್ಯಾಸ ಮಾಡಿರುವುದರೊಟ್ಟಿಗೆ ಅದನ್ನು ದೇವರು, ಬ್ರಾಹ್ಮಣರು ಮುಂತಾದವರಂತೆ

ಪೂಜಿಸುವಂತೆ ಸೂಚಿಸಲಾಗಿದೆ. ಬ್ರಹ್ಮಚರ್ಯ ಮುಕ್ತಿಗೆ ಸೋಪಾನವೆಂದು ಹೇಳಿದ್ದರೂ ಲೈಂಗಿಕ ಶಕ್ತಿಯ ವೃದ್ಧಿಗೆ ವಿಧಾನಗಳನ್ನು ಸೂಚಿಸಿದೆ. ಇದೇ ರೀತಿ ಮದ್ಯದ ಬಗ್ಗೆಯೂ ಕೂಡ ದ್ವಿಮುಖ ನೀತಿ ಇದೆ. ಇವೆಲ್ಲವುಗಳ ಆಧಾರದ ಮೇಲೆ ನಾವು ಈ ಅವೈಜ್ಞಾನಿಕ ಅಂಶಗಳು ವೈಜ್ಞಾನಿಕ ಅಂಶಗಳಿಗೆ ಬೆರೆತು ವಿಜ್ಞಾನದ ಬೆಳವಣಿಗೆಯನ್ನು ಅಪಾಯಕರ ರೀತಿಯಲ್ಲಿ ತಡೆಹಿಡಿದದ್ದದ ಭಾರತೀಯ ವಿಜ್ಞಾನ ಪಾಶ್ಚಿಮಾತ್ಯ ವಿಜ್ಞಾನದ ರೀತಿ ಬೆಳವಣಿಗೆಯನ್ನು ಕಾಣದೆ ಕಾಲಕ್ರಮೇಣ ಹಿಂದೆ ಸರಿಯಿತು.



# ವಿಶ್ವ ಕಥಾಲೋಕದ ಮನುಷ್ಯ
(ಕಳೆದ ಸಂಚಿಕೆಯಿಂದ)

---

– ಬಿದರಹಳ್ಳಿ ನರಸಿಂಹಮೂರ್ತಿ

ಆಸ್ಟ್ರೇಲಿಯನ್ ಕಥೆಗಾರ ಕ್ಸೇವಿಯರ್ ಹರ್ಬರ್ಟ್ ಬರೆದಿರುವ 'ಹಾಡುಗಾರ ಕೈಜೆಕ್' (ಸಂ. 8) ಒಂದು ಅದ್ಭುತವಾದ ಕತೆ. ಕೈಜೆಕ್ ಮತ್ತು ಅವನ ಹೆಂಡತಿ ನಿನ್ಯೈಲ್ ಹೊಳೆ ದಂಡೆಯ ಮೇಲೆ ನಡೆಯುತ್ತಿದ್ದಾರೆ. ಕೊಳಕು ಬಟ್ಟೆಯ ಲಂಗೋಟಿಯಷ್ಟೇ ಅವನ ಉಡುಪು. ಎಸೆಗೋಲು ಹಿಡಿದು ಮೈತುಂಬ ಬೆವರುತ್ತ ದುಡು ದುಡು ನಡೆದಿದ್ದಾನೆ. ಅದಿವಾಸಿಗಳ ನಾಡಿನಲ್ಲೇ ಅತ್ಯಂತ ಖ್ಯಾತ ಹಾಡುಗಾರ. ಬರುವ ಹುಣ್ಣಿಮೆ ದಿನ ಅವನು ಪೇಪರ್ ಬ್ಯಾರ್ಕ್ ಪ್ರದೇಶದ ಮರ್ರಾಥೇಲಾ ಪಂಗಡದ ಮಹಾಮೇಳದಲ್ಲಿ ಹಾಜರಿರಬೇಕು. ತನ್ನ ದಿವ್ಯ ಹಾಡಿನಿಂದ ಎಲ್ಲರೂ ಮೈಮರೆತು ಕುಣಿಯುವಂತೆ ಮಾಡಬೇಕು. ಆದರೆ ಅವನ ಹೊಸ ಹಾಡು ಇನ್ನೂ ಸಿದ್ಧವಾಗೇ ಇಲ್ಲ. ಅವನನ್ನ ನೆರಳಿನಂತೆ ಹಿಂಬಾಲಿಸುವ ನಿನ್ಯೈಲ್ ಅವನಿಗೆ ಸ್ಫೂರ್ತಿ ಸಿಗುವ ಕ್ಷಣಕ್ಕಾಗಿ ಕಾಯುತ್ತ ಸಂಸಾರದ ಗುಡ್ಲು ಚಾಪೆಯ ಮೂಟೆ ಹೊತ್ತು ಅವನ ಹಿಂದೆ ಸಾಗಿದ್ದಾಳೆ. ಗುಂಗುರು ಕೂದಲಿನ, ತೋರ ಮೈಯ್ಯಿನ ನಿನ್ಯೈಲ್‌ಗೆ ಗಂಡನ ಪ್ರತಿಭೆ ಕುರಿತು ಅಪಾರ ಹೆಮ್ಮೆ.

ಮರದ ಗೆಲ್ಲುಗಳು, ಕೊಕಾಟೋ ಹಕ್ಕಿಗಳು, ಕಾಂಗರೂಗಳ ನಡುವೆ ದುಗುಡದಿಂದ ಸಾಗುವ ಕೈಜೆಕ್‌ಗೆ ನಾಯಿ ಬೊಗಳುವುದು ಕೇಳಿಸುತ್ತದೆ. ಅಂದರೆ ಹತ್ತಿರದಲ್ಲೆಲ್ಲೋ ಬಿಳಿಯ ಮನುಷ್ಯ ಬಂಗಾರದ ಹುಡುಕಾಟದಲ್ಲಿದ್ದಾನೆ ಎಂದರ್ಥ.

ಅವನ ಬಳಿ ತಂಬಾಕು ಇರುತ್ತದೆ ಎಂಬ ಸಂಗತಿ ಕೈಜೆಕ್‌ನನ್ನು ಉತ್ತೇಜಿಸುತ್ತದೆ. ಬಿಳಿಯನ ಡೇರೆಗೆ ಧಾವಿಸುತ್ತಾನೆ. ಐವತ್ತು ವರ್ಷದ ಬಿಳಿಯ ಆ್ಯಂಡಿಗ್ರಾಂಟ್‌ಗೆ ಎಷ್ಟು ಹುಡುಕಿದರೂ ಬಂಗಾರ ಸಿಗದೆ ಹತಾಶೆಯಾಗಿದೆ. ಹವೆ ಒಗ್ಗದೆ ಅವನ ಪಿತ್ತಕೋಶ ಕೆಟ್ಟು ಮೈಮೇಲೆ ತುರಿಕಜ್ಜಿಯಾಗಿದೆ. ತನ್ನ ಹುಡುಕಾಟವನ್ನು ಅರ್ಥಮಾಡಿಕೊಳ್ಳದ, ಬಂಗಾರದ ಬೆಲೆಯನ್ನು ಅರಿಯದ ಕರಿಯರನ್ನು ಕಂಡರೆ ಕೆಂಡದಷ್ಟು ಕೋಪ ಅವನಿಗೆ. ಕೈಜೆಕ್‌ನ ಸ್ನೇಹದ ಭಂಗಿ, ಒಲಿಸುವ ಮಾತುಗಳಿಗೆ ರೇಗುತ್ತಾನೆ- "ನಾನು ಚೆನ್ನಾಗಿ ಕೆಲಸ ಮಾಡಬಲ್ಲೆ ಬಾಸ್. ಸೂರ್ಯ ಹುಟ್ಟೋಕಿಂತ ಮುಂಚೇನೆ ಎದ್ದುಬಿಡ್ತೀನಿ" ಎಂದು ಕೈಜೆಕ್ ಪಟ್ಟುಹಿಡಿದಾಗ "ಬೋಳಿಮಗನೆ" ಎನ್ನುತ್ತ ಪಿಕಾಸಿ ಎತ್ತಿ ಹೊಡೆಯಲು ಬರುತ್ತಾನೆ. ನಾಯಿ ಛೂ ಬಿಡುತ್ತಾನೆ. ಉಪಾಯವಿಲ್ಲದೆ ಹೊರಡುತ್ತಾನೆ ಕೈಜೆಕ್. ಸ್ವಲ್ಪ ದೂರ ಹೋದಾಗ ದೊಡ್ಡ ನೀಲಗಿರಿ ಮರವೊಂದು ಬಿರುಗಾಳಿಗೆ ಬಿದ್ದಿರುತ್ತದೆ. ಅದರ ಬೊಡ್ಡೆಯಲ್ಲಿ ತಿನ್ನಲು ಮರಹುಳುಗಳು ಸಿಗಬಹುದೆಂಬ ಆಸೆಯಿಂದ ಗಂಡ ಹೆಂಡತಿ ಹೋಗುತ್ತಾರೆ. ಅಲ್ಲಿನ ಕಲ್ಲುಗಳ ನಡುವೆ ಬಂಗಾರದ ಗಟ್ಟಿಯೊಂದು ಸಿಗುತ್ತದೆ. "ತಂಬಾಕಿಗೆ ತೊಂದರೆಯಿಲ್ಲ" ಎಂದು ಹಲ್ಲುಕಿರಿದು ಬಿಳಿಯನ ಬಳಿ ಓಡುತ್ತಾನೆ. ಬಂಗಾರ ಕಂಡದ್ದೇ ಆ್ಯಂಡಿಯ ರಕ್ತದ ಒತ್ತಡ ಹೆಚ್ಚುತ್ತದೆ. ಹಾರೆ ಗುದ್ದಲಿ ಹೊರಿಸಿಕೊಂಡು ಹೋಗಿ ನೋಡುತ್ತಾನೆ. ಅಲ್ಲಿ ಇನ್ನೂ ಬಂಗಾರದ ಗಟ್ಟಿಗಳು ಸಿಗುತ್ತವೆ. "ಥ್ಯಾಂಕ್ಸ್ ತಮ್ಮಯ್ಯ. ಇದಕ್ಕಾಗಿ ಜೀವಮಾನವಿಡೀ ಹುಡುಕ್ತಾ ಇದ್ದೆ.....ಇಷ್ಟರ ತನಕ ಯಾವ ಕರಿಯ ಮನುಷ್ಯನಿಗೂ ಸಿಗದಷ್ಟು ಸಂಬಳ ನಿನಗೆ ಕೊಡುತ್ತೇನೆ. ನಿನ್ನ ಮೇಲೆ ನನಗೆ ತುಂಬಾ ಪ್ರೀತಿ.'' ಇತ್ಯಾದಿ ಬಡಬಡಿಸುತ್ತ ನೆಲ ಅಗೆಯುತ್ತಾನೆ ದುರಾಸೆಯಿಂದ. ಕೈಜೆಕ್ ತಂಬಾಕಿನ ಬಗ್ಗೆ, ಊಟದ ಬಗ್ಗೆ ಪ್ರಸ್ತಾಪಿಸಿದಾಗ ಡೇರೆಗೆ ಹೋಗಿ ಬೇಕಾದ್ದು ತಿಂದು ಕುಡಿಯಿರಿ ಎನ್ನುತ್ತಾನೆ. ಹೆಂಡತಿಯೊಡನೆ ಡೇರೆಗೆ ಓಡಿ ಬಿಸಿರೊಟ್ಟಿ, ಮಾಂಸ ತಿನ್ನುತ್ತಾನೆ. ಬಿಳಿಯನ ಪೈಪಿಗೆ ತಂಬಾಕು ತುಂಬಿ ಸರದಿಯಲ್ಲಿ ಸೇದುತ್ತಾರೆ. ಕೈಜೆಕ್ ಉರಿಯುವ ಬೆಂಕಿಗೆ ಕಣ್ಣು ನೆಟ್ಟು ಲೋಕವನ್ನೇ ಮರೆಯುತ್ತಾನೆ. ಥಟ್ಟನೆ ಎದ್ದು ಅವೇಶದಿಂದ ತಾಳ ಹಾಕುತ್ತ ಕುಣಿಯುತ್ತಾನೆ.

"ಓ ಮುನ್ನಿಜುರ್ರಾ ಕಾಜೆನ್ ಜೈ, ಈ ಮಿನಿ ಕಿನ್ನಿ ಗೋಲ್ಟ್
ವ್ಹಾ! ನಾರ್ರಾ ಅಕಿನಿನ್ಯಾ ಕೂರಿ ಮುಂಗವಡ್ಡಿಯೂ...."

ಎಂಬ ಕಾಡಿನ ಹಾಡು ಹುಟ್ಟುತ್ತದೆ. ನಿನ್ಯುಲ್‌ಳ ಕಣ್ಣು ಮಿನುಗುತ್ತದೆ. ತುಟಿ ತೃಪ್ತಿಯಿಂದ ಅಲುಗುತ್ತದೆ.

"ಬಾ ತಮ್ಮಯ್ಯ, ನೋಡು ದೇವರು ಕೊಟ್ಟಿರುವ ನಿಧಿಯನ್ನು" ಎಂದು ಕೂಗುತ್ತ ಬಿಕ್ಕಳಿಕೆ ಹತ್ತಿಸಿಕೊಂಡ ಬಂಗಾರದ ಬೇಟೆಗಾರನನ್ನು ಅವನ ಅವಸ್ಥೆಗೆ ಬಿಟ್ಟು ಕಾಡಿನ ರಾಜ-ರಾಣಿಯರಂತೆ, ಧನ್ಯವಾದ ಕೂಡ ಹೇಳದೆ ಪೇಪರ್ ಬಾರ್ಕ್ ಪ್ರದೇಶದ ಕಡೆ ಹೆಜ್ಜೆ ಹಾಕುತ್ತಾರೆ ಕೈಜೆಕ್ ಮತ್ತು ನಿನ್ಯುಲ್.

ಸಂಪೂರ್ಣ ಬಹಿರ್ಮುಖಿಯಾಗಿ ಭೌತಿಕ ಸುಖಗಳ ದುರಾಸೆಯಲ್ಲಿ ಕೊಳೆಯುವ ಆ್ಯಂಡಿ ಮತ್ತು ಅಂತರ್ಮುಖಿಯಾಗಿ ಕಲಾತ್ಮಕತೆಯ ಖುಷಿ ಸಾಧಿಸುವ ಕೈಜೆಕ್ ಮನುಷ್ಯ ಸ್ವಭಾವದ ಎರಡು ವಿರುದ್ಧ ಮಾದರಿಗಳನ್ನು ಪ್ರತಿನಿಧಿಸುತ್ತಾರೆ. ಮುಗ್ಧತೆಯ ಅಡಿಗಲ್ಲಾದ ಆದಿವಾಸಿ ಸಂಸ್ಕೃತಿಯ ಹಿನ್ನೆಲೆಯಲ್ಲಿ ಹಣ ಒಂದೇ ಮೌಲ್ಯವಾಗಿರುವ ಆಧುನಿಕ ನಾಗರೀಕತೆಯನ್ನು ವಿಡಂಬಿಸಲಾಗಿದೆ. ಕ್ರಿಶ್ಚಿಯನ್ ಧರ್ಮದ ಬ್ಯಾಟರಿ ಹಿಡಿದು ನಾಗರೀಕತೆ ಬಿತ್ತಲು ಖಂಡಾಂತರಗಳಿಗೆ ನುಗ್ಗಿದ ಬಿಳಿಯರು ಅಲ್ಲಲ್ಲಿನ ಆದಿವಾಸಿಗಳನ್ನು ಹತ್ತಿಕ್ಕಿದ ಪರಿಯನ್ನು ಸೂಚಿಸುತ್ತ ಕತೆ ಐತಿಹಾಸಿಕ ಆಯಾಮವನ್ನೂ ಗಳಿಸುತ್ತದೆ. ಕೈಜೆಕ್-ನಿನ್ಯುಲ್‌ರ ಕಾಡಿನೊಡಲಿನ ಬದುಕು, ಅಂತರ್ಗಾಮಿಯಾದ ಗಾಢ ಪ್ರೀತಿ, 'ಇಂದು ಇಂದಿಗೆ, ನಾಳೆ ನಾಳೆಗೆ' ಎಂಬ ತೃಪ್ತಿ ಕಥೆಯ ಮಾನವೀಯ ಮೌಲ್ಯವನ್ನು ಹೆಚ್ಚಿಸುತ್ತವೆ. ಇದೊಂದು ಶ್ರೇಷ್ಠ ಕಥೆ.

ಕಲೆ ಬದುಕಿಗೆ ತಳಿಕೆ ಹಾಕಿಕೊಳ್ಳುವ, ವಿವಿಧ ಪಲಕುಗಳನ್ನು 'ಹಾಯಿಪಟಲ, (ಸಂ. 9), 'ಕೊನೆಯ ಎಲೆ'(ಸಂ. 13), 'ದೇವಶಿಲ್ಪಿ"(ಸಂ. 9) 'ಬಾಲಮೇಧಾವಿ' (ಸಂ. 18), "ಸೇಬಿನ ಮರ" (ಸಂ. 9), "ಹೆಣ್ಣು ಮತ್ತು ಮಧುಪಾತ್ರೆ" (ಸಂ. 5) "ಬೂದಿ ಮುಚ್ಚಿದ ಕಿಡಿ" (ಸಂ. 5) ಈ ಕತೆಗಳಲ್ಲಿ ಕಾಣಬಹುದು.

ಜನಪ್ರಿಯ ರಷ್ಯನ್ ಲೇಖಕ ಮ್ಯಾಕ್ಸಿಂ ಗೋರ್ಕಿಯ ಮಕರ್ ಚುದ್ರ ಮತ್ತೊಂದು ಮಾರ್ಮಿಕ ಕಥೆ. ಸಾಹಸಿ ಅಲೆಮಾರಿ ಬದುಕನ್ನು ಸಮರ್ಥಿಸುವ ಜಿಪ್ಸಿ ಮುದುಕ ಮಕರ್ ಚುದ್ರ ಕಥೆಗಾರನಿಗೆ ನಿರೂಪಿಸುವ ವೃತ್ತಾಂತವು ಪ್ರೀತಿ ಮತ್ತು ಅಹಂಕಾರ ಪರಸ್ಪರ ತೀಡಿಕೊಂಡಾಗ ಉಂಟಾಗುವ ದುರಂತವನ್ನು

ಲೊಯ್ಯಾನನ್ನು ಇರಿದು ಕೊಲ್ಲುತ್ತಾನೆ. ಹೀಗೆ ಕೊನೆಗೊಳ್ಳುತ್ತದೆ.

ಮೇಲುನೋಟಕ್ಕೆ ಮೆಲೊಡ್ರಾಮ್ಯಾಟಿಕ್ ಅನ್ನಿಸಬಹುದಾದ ಈ ಕಥೆ ಪ್ರೇಮದ ಒಳತೋಟಿಗಳನ್ನ ಹಾಗೂ ಪ್ರೇಮ ವಿಫಲವಾಗುವ ಹೆದರಿಕೆಯಿಂದ ಹುಟ್ಟುವ ರೋಷವನ್ನ ಅಭಿನಯಿಸಿ ತೋರಿಸುತ್ತದೆ. ಪ್ರೀತಿ ಎಂಬುದು ಪಡೆದು ಕೊಳ್ಳುವುದರಲ್ಲಿಲ್ಲ ಎಲ್ಲವನ್ನೂ ಕೊಟ್ಟುಕೊಳ್ಳುವುದರಲ್ಲಿದೆ ಎಂದು ಪರ್ಯಾಯವಾಗಿ ವ್ಯಾಖ್ಯಾನಿಸುತ್ತದೆ. ಅಹಂಕಾರ ಮೂಲದಿಂದ ಹುಟ್ಟುವುದು ಕೇವಲ ಆಕರ್ಷಣೆ; ಸಮರ್ಪಣ ಭಾವದಿಂದ ಹುಟ್ಟುವುದುನಿಜವಾದ ಪ್ರಿತಿ.

ಇದೇ ರೀತಿ ಪ್ರೀತಿಯ ನೂರೆಂಟು ಮಗ್ಗಲುಗಳನ್ನು ಶೋಧಿಸುವ ಕತೆಗಳೆಂದರೆ ಮರಳುಗಾಡಿನ ಮದುವೆ (ಸಂ. 23), ಡೇಗೆ ಹಕ್ಕಿ (ಸಂ. 15), ಸ್ಯಾಮ್ಸನ್ ಮತ್ತು ಡಿಲೈಲ (ಸಂ, 19), ಹೆಣ್ಣು ಮತ್ತು ಮಧುಪಾತ್ರೆ (ಸಂ. 5) ಕಣ್ಮರೆಯಾದ ಫೀಬಿ (ಸಂ. 13), ಅಂತ್ಯವಿಲ್ಲದ ಪ್ರೇಮಗೀತೆ (ಸಂ. 9) ಹಾಗೂ ಪ್ರೇಮಕ್ಕೆ ಸ್ಥಾನ (ಸಂ. 4).

ವೆಲ್ಷ್ ಕತೆಗಾರ ರೈಸ್ ಡೇವಿಸ್‌ನ ಕಥೆ "ಕ್ಯಾಲೆಬನ ದೋಣಿ" (ಸಂ. 10) ಮನುಷ್ಯನನ್ನ ಕಾಡುತ್ತ ಬಂದಿರುವ ಪುರಾಣಪ್ರಜ್ಞೆ ಮತ್ತು ಅಂಕ್ಕಂಟಿಕೊಂಡ ಆಧ್ಯಾತ್ಮದ ಪೂರ್ವಗ್ರಹಗಳನ್ನು ಚಿತ್ರವತ್ತಾಗಿ ವಿಡಂಬಿಸುತ್ತದೆ. ಗಿಲ್ಗಮೇಶ್ ಮಹಾಕಾವ್ಯದ "ಜಲಪ್ರಳಯ ಪ್ರಕರಣ" ಹಾಗೂ ಬೈಬಲ್ಲಿನ "ನೋವಾನ ದೋಣಿ" ಪುರಾಣಗಳ ಅಣಕವೇ ಈ ಕಥೆಗೆ ವಸ್ತು. ಮದುವೆಯಾಗದೆ ನಡುವಯಸ್ಸಿಗೆ ಬಂದ ಬಡಕಲು ಶರೀರದ ಬಡವ ಕ್ಯಾಲೆಬನಿಗೆ ದೃಷ್ಟಿ ಸರಿಯಾಗಿಲ್ಲದಿದ್ದರೂ ಬೈಬಲ್ಲಿನ "ಕಾಲಜ್ಞಾನ ಪರ್ವ"ವನ್ನು ಓದುವ, ವ್ಯಾಖ್ಯಾನಿಸುವ ಗೀಳು. ಓದಿ ಓದಿ ಕೂಚು ಭಟ್ಟನಾದ ಅವನಿಗೆ ಜಗತ್ತು ಮತ್ತೊಮ್ಮೆ ಅತ್ಯುಗ್ರ ರೀತಿಯಲ್ಲಿ ನಾಶವಾಗುವ ಹೆದರಿಕೆ ಶುರುವಾಗುತ್ತದೆ. ಇದನ್ನು ಸಮರ್ಥಿಸುವಂತೆ ಕಾಕತಾಳೀಯವಾಗಿ ಆ ವರ್ಷ ವಿಪರೀತವೆನ್ನಿಸುವ ಚಂಡಮಾರುತವೆದ್ದು ಸಮುದ್ರ ಹುಯ್ಲಿಡುತ್ತದೆ. ಸರಿ. ಟ್ರಾಮ್ ಪ್ರಾಸರ್ ಎಂಬುವನ ಮುರುಕು ದೋಣಿಯನ್ನ ಕೊಂಡು ಕಾವೆಜ್ ನೋವಾನ ಪಾತ್ರದ ತಾಲೀಮಿಗೆ ತೊಡಗುತ್ತಾನೆ. ಅಂಚೆ ವಿತರಕಿ ಮಾರ್ಗಿಯೆಡ್‌ಳ ವಾಸ್ತವವಾದಿ ಮಾತುಗಳನ್ನು ಆಧ್ಯಾತ್ಮದ ಧಿಮಾಕಿನಲ್ಲಿ ತಿರಸ್ಕರಿಸುತ್ತಾನೆ. ಕಡೆಗೆ

ವರ್ಣಿಸುತ್ತದೆ. ರಾದ ಜಿಪ್ಸಿ ಸುಂದರಿ. ಅವಳ ಲಾವಣ್ಯವನ್ನು ವರ್ಣಿಸಲು ತಕ್ಕ ಪದಗಳೇ ಇಲ್ಲ. ಎಷ್ಟೋ ಯುವಕರ ಹೃದಯಗಳನ್ನು ನುಚ್ಚುನೂರು ಮಾಡಿದವಳು ಶ್ರೀಮಂತ ಜಮೀನ್ದಾರನೊಬ್ಬ ದುಂಬಾಲು ಬಿದ್ದಿದ್ದಾಗ ಅವನ ಹಣದ ಥೈಲಿಯನ್ನ ಕಾಲಿಂದ ಒದ್ದು ಅವಮಾನ ಮಾಡಿದವಳು. ಅವಳನ್ನ ಮದುವೆಯಾಗಲು ಎಷ್ಟು ಬೇಕಾದರೂ ಹಣ ಕೊಡುವೆನೆಂದಾಗ ರಾದಳ ಅಪ್ಪ ದುನ್ಯಿಲಾ ಹೇಳುವ ಮಾತು : "ಶ್ರೀಮಂತರು ಮಾತ್ರ ತಮ್ಮ ಹಂದಿಗಳಿಂದ ಹಿಡಿದು ಆತ್ಮಸಾಕ್ಷಿಯವರೆಗೆ ಎಲ್ಲವನ್ನೂ ಮಾರಿಕೊಳ್ಳುತ್ತಾರೆ. ನಾನು ...ಹಾಗೆಲ್ಲ ಮಾರಾಟ ಮಾಡುವಂತ ಹಲ್ಕ ಮನುಷ್ಯ ಅಲ್ಲ''. ನಂತರ ರಾದಳ ಸೌಂದರ್ಯಕ್ಕೆ ವರ್ದಾವರ್ದಿಯಾಗುವ ಶೌರ್ಯ ಸಾಹಸದ ಜಿಪ್ಸಿ ಯುವಕ ರೋಯ್ಖಾ ಬರುತ್ತಾನೆ. ಅವನು ಪಿಟೀಲು ನುಡಿಸುವುದನ್ನು ಅವಳು ಮೆಚ್ಚುತ್ತಾಳೆ. ಪಿಟೀಲನ್ನು ಯಾರು ಮಾಡಿಕೊಟ್ಟರೆಂದು ಕೇಳಿದಾಗ ಲೋಯ್ಖಾ "ನಾನೇ ಮಾಡಿಕೊಂಡೆ. ಮರದಿಂದ ಮಾಡಲಿಲ್ಲ, ನಾನು ಗಾಢವಾಗಿ ಪ್ರೇಮಿಸಿದ ತರುಣಿಯೊಬ್ಬಳ ವಕ್ಷದಿಂದ ಮಾಡಿದೆ. ನಾನು ನುಡಿಸೋ ತಂತಿಗಳೆಲ್ಲ ಅವಳ ಹೃದಯದ ಎಳೆಗಳು. ಪಿಟೀಲು ಆಗಾಗ ನಿಷ್ಠೆಗೆಟ್ಟು ಅಪಸ್ವರ ಹೊಮ್ಮಿಸುತ್ತದೆ. ಆದರೆ ಕಮಾನನ್ನು ಹೇಗೆ ಬಳಸಬೇಕು ಅಂತ ನನಗೆ ಗೊತ್ತು" ಅನ್ನುತ್ತಾನೆ.

ಈ ಮಾತು ರಾದಳ ಅಹಂಭಾವಕ್ಕೆ ನಾಟುತ್ತದೆ. ಅವನಿಗೆ ಬಗ್ಗಬಾರದೆಂಬ ಶಪಥದಲ್ಲಿ ಪ್ರೀತಿಯನ್ನು ಹತ್ತಿಕ್ಕುತ್ತಾಳೆ. ತಂಡದ ಹಿರಿಯರಿಗೆ ಇವರ ನಡಾವಳಿ ಹೆದರಿಕೆ ಹುಟ್ಟಿಸುತ್ತದೆ. "ಎರಡು ಹೆಬ್ಬಂಡೆಗಳು ಒಂದಕ್ಕೊಂದಿರಾಗಿ ಇನ್ನೊಂದು ಉರುಳುತ್ತಿರುವಂತೆ" ಅವರಿಗೆ ಭಾಸವಾಗುತ್ತದೆ. ಇಬ್ಬರೂ ವೈಯಕ್ತಿಕ ಸ್ವಾತಂತ್ರ್ಯ ವನ್ನ ವೈಭವೀಕರಿಸಿಕೊಂಡು ಪ್ರೇಮಿಯ ದಾಸ್ಯ ದಕ್ಕಿಸಿಕೊಳ್ಳಲು ಹೆಣಗುತ್ತಾರೆ. ಲೋಯ್ಖಾನ್ನ ರಾದ ಚಾಟಿ ಬೀಸಿ ಕಾಲೆಳೆದು ಬೀಳಿಸುತ್ತಾಳೆ. ಅವನು ಅವಳನ್ನ ಇರಿಯ ಹೋದಾಗ, ಪಿಸ್ತೂಲು ಗುರಿಯಿಟ್ಟು ಅವನ ಶರಣಾಗತಿ ಕೇಳುತ್ತಾಳೆ. ಕಡೆಗೆ ಮದುವೆಯಾಗಿ ಒಬ್ಬರನ್ನೊಬ್ಬರು ಹದ್‌ಬಸ್ತಿಗೆ ತರುವ ಆಲೋಚನೆಯಲ್ಲಿ ಉರಿಯುತ್ತಾರೆ. ಪ್ರೀತಿಯನ್ನು ಪ್ರಕಟಿಸುವ ನುಡಿಗಟ್ಟುಗಳಲ್ಲಿ ಅಹಂಕಾರವನ್ನೆ ಮೆರೆಸುತ್ತಾರೆ. ತನ್ನ ಮುಂದೆ ಮಂಡಿಯೂರಿ ಬೇಡಿಕೊಂಡರೆ ಮದುವೆಯಾಗುವು ದಾಗಿ ರಾದಾ ಹೇಳುತ್ತಾಳೆ. ಹಾಗೆ ಮಾಡಲು ಒಪ್ಪಿ ಲೋಯ್ಖಾ ಮದುವೆ ದಿನ ಅವಳನ್ನ ಹಠಾತ್ತಾಗಿ ಇರಿದು ಕೊಲ್ಲುತ್ತಾನೆ. ರಾದಳ ಅಪ್ಪ ದಿಗ್ಭ್ರಮೆಯಲ್ಲಿ

ಸುಸ್ತಾಗಿ ತೀವ್ರ ನ್ಯೂಮೋನಿಯಾಕ್ಕೆ ತುತ್ತಾಗಿ ಅವಳ ಮಡಿಲಿಗೆ ಬಿದ್ದು ಬದುಕು ತ್ತಾನೆ. ಅವಳು ಅವನನ್ನು ಸಾವಿನಿಂದ ರಕ್ಷಿಸಿ ತನ್ನ ಗಂಡನನ್ನಾಗಿ ಮಾಡಿ ಕೊಳ್ಳುತ್ತಾಳೆ.

ಕತೆಗಾರ ತಿಳಿ ವ್ಯಂಗ್ಯ ಹಾಗೂ ಚುರುಕು ಹಾಸ್ಯ ಬೆರೆತ ಶೈಲಿಯಲ್ಲಿ ಮನುಷ್ಯನ ನೆಲಕ್ಕಂಟುವ ಹಾಗೂ ಆಕಾಶಕ್ಕೆ ನೆಗೆಯುವ ಆಕಾಂಕ್ಷೆಗಳ ಧ್ರುವೀಕರಣವನ್ನ ಸಾಂಕೇತಿಕವಾಗಿ ತೆರೆದಿಡುತ್ತಾನೆ. ಮೌಢ್ಯದಿಂದಾಗಿ ಗಾಳಿ ಗುದ್ದುವ ಕ್ಯಾಲೆಬ್ ಓದುಗನ ಅನುಕಂಪಕ್ಕೆ ಬಿದ್ದರೆ ದಟ್ಟ ವಾಸ್ತವ ಪ್ರಜ್ಞೆ ಜೀವಂತಿಕೆ ಹಾಗೂ ದಿಟ್ಟ ತನಗಳ ಮಾರ್ಗಿಯೆಡ್ ಅವನ ಪ್ರಶಂಸೆ ಗಿಟ್ಟಿಸುತ್ತಾಳೆ. ಕ್ಯಾಲೆಬ್ ಕೊಂಡ ದೋಣಿಯನ್ನ ಬೆಟ್ಟದ ಮೇಲೆ ಸಾಗಿಸುವ ಪ್ರಶ್ನೆ ಬಂದಾಗ ಕೆಲಸದಾಳುಗಳು "ನಿನ್ನನ್ನು ಬಿಟ್ಟು ನಾವೆಲ್ಲರೂ ಮುಳುಗಿ ಹೋಗ್ತೇವೆ. ಇನ್ನು ನಿನ್ನ ಹತ್ತು ಷಿಲ್ಲಿಂಗ್ ತಗೊಂಡು ಏನು ಮಾಡಬೇಕು? ಸ್ವರ್ಗದಲ್ಲಿ ಖಂಡಿತ ಅಂಗಡಿಗಳಾಗಲಿ ಬ್ಯಾಂಕುಗಳಾಗಲಿ ಇರೋದಿಲ್ಲ.'' ಎನ್ನುತ್ತಾರೆ. ಇದು ಅವರ ಹಾಸ್ಯ ಪ್ರಜ್ಞೆ, ಬದುಕನ್ನು ಲಘುವಾಗಿ ಅನುಭವಿಸಬೇಕೆಂಬ ಸಾಮಾನ್ಯ ಜ್ಞಾನ ಹಾಗೂ ಪ್ರಾಪಂಚಿ ಕತೆಯನ್ನು ಪ್ರತಿಬಿಂಬಿಸುತ್ತದೆ. ಆದರೆ ಕಾಲೇಬನ ಸಂತನ ಪೋಜೇನು ಕಡಿಮೆ ಇಲ್ಲ. "ಈ ಹತ್ತು ಷಿಲ್ಲಿಂಗ್ ಕೊಟ್ಟು ಶುಭ್ರವಾದ ಶವ ವಸ್ತ್ರ ಕೊಂಡಿಟ್ಟುಕೋ ಬಹುದು. ಇವತ್ತಿನಿಂದ ಸರಿಯಾಗಿ ಆರನೆ ದಿನ ಅದನ್ನ ಹೊದ್ದು ಮಲಗಿ. ಪ್ರಳಯ ಬೆನ್ನಟ್ಟಿ ಬರ್‍ತಿದೆ." ಎನ್ನುತ್ತಾನೆ. ಅವನ ನಾಲಿಗೆಯಲ್ಲಿ ಪ್ರವಾಹದ ಅಗ್ನಿಯೇ ಇದೆಯೋ ಎಂದು ಅವರಿಗೆ ಭಾಸವಾಗುತ್ತದೆ. ಇಂಥ ಇನ್ನೊಂದು ಪ್ರಸಂಗದಲ್ಲಿ ಅವನ ಮಾತಿಗೆ ಹೆದರಿ "ಬೆಂಕಿಯ ಮುಂದೆ ಎತ್ತಿ ಹಿಡಿದಿದ್ದ ತನ್ನ ಒಳಲಂಗವನ್ನ" ಕೆಳಕ್ಕೆ ಬಿಡುತ್ತಾಳೆ ಮಾರ್ಗಿಯೆಡ್. ಇವನ ಉಪದ್ವ್ಯಾಪವನ್ನು ಕಂಡು ಆಕ್ಷೇಪಿಸುವ ಇಂಗರ್ಜಿಯ ಮುಖ್ಯಸ್ಥನನ್ನು ಓಡಿಸುತ್ತದೆ ಕ್ಯಾಲೆಬನ ನಾಲಿಗೆ. ಮಾತಿನ ಮೋಡಿಯ ಬುರುಡೆಬಿಟ್ಟು ಸಾಮಾನ್ಯರನ್ನ ತಪ್ಪು ದಾರಿಗೆ ಎಳೆಯುವ ಸಂತರ ತಳಿಯ ಪ್ರದರ್ಶನ-ರತಿಯನ್ನ ಈ ಘಟನೆಗಳು ವಿಡಂಬಿಸುತ್ತವೆ. ಬದುಕಿನ ಸುಖ ಸಂತೋಷ ಗಳನ್ನ ಅಲ್ಲಗಳೆದು ಆತ್ಮಾರ್ಪಣೆಯ ಅಮಾನವೀಯ ಆದರ್ಶವನ್ನ ಹುಟ್ಟುಹಾಕುವುದು ಎಂಥ ದೊಡ್ಡ ತಪ್ಪು ಎನ್ನುವುದು ಕಥೆಯ ಕಡೆಗೆ ಮನವರಿಕೆಯಾಗುತ್ತದೆ.

ದೇವರು-ಧರ್ಮ, ಆಧ್ಯಾತ್ಮ-ಪುರಾಣಗಳ ಹೆಸರಿನಲ್ಲಿ ಮುಗ್ಧ ಜನಗಳ

ಕಣ್ಣಿಗೆ ಮಣ್ಣೆರಚುವ ಷಡ್ಯಂತ್ರಗಳನ್ನ ಕುರಿತು ಇಲ್ಲಿನ ಉತ್ತಮ ಕಥೆಗಳೆಂದರೆ 'ಕೊನೆಯ ದೇವಧೂತ' (ಸಂ. 19)), 'ಅಕ್ಕ ಅಂತೋನಿಯಾ' (ಸಂ. 19) 'ಬೂದು ಬಣ್ಣದ ಕತ್ತೆ' (ಸಂ. 16 , ಹಾಗೂ "ಒಬ್ಬ ಬುಲೆರೊಗೆ ಲಾಜರು ಸಲ್ಲಿಸಿದ ಸೇವೆ [ಸಂ. 19].

ಪೋಲೆಂಡಿನ ಕತೆಗಾರ ಬೊಲಿಸ್ಲಾವ್ ಪ್ರೂಶ್ ಬರೆದ "ಮಾನವ ತಂತಿ" ವಿಶ್ವ ಕಥಾ ಕೋಶದ ಅತ್ಯುತ್ತಮ ಕಥೆಗಳಲ್ಲಿ ಒಂದು. ಐದು ನಿಮಿಷಗಳಲ್ಲಿ ಓದ ಬಹುದಾದ ಮೂರು ಪುಟದ ಈ ಪುಟ್ಟ ಕಥೆ ಬದುಕಿನ ಬಗ್ಗೆ ಆಳವಾಗಿ ಯೋಚಿಸಲು ಹಚ್ಚುತ್ತದೆ. ವಸ್ತು ಹೀಗಿದೆ : ಶ್ರೀಮಂತ ಕೌಂಟೆಸ್ ಒಬ್ಬಳು ಅನಾಥಾಲಯಕ್ಕೆ ಭೇಟಿ ಕೊಟ್ಟಾಗ ಅಲ್ಲಿನ ಮಕ್ಕಳು ಪುಸ್ತಕಕ್ಕಾಗಿ ಕಚ್ಚಾಡುತ್ತಿರುತ್ತವೆ. ಮೇಲ್ವಿ ಚಾರಣೆಯ ದಾದಿಯನ್ನ ಕೇಳಿದಾಗ ಮಕ್ಕಳಿಗೆ ಪುಸ್ತಕವೆಂದರೆ ಪ್ರಾಣ, ಆದರೆ ಅನಾಥಾಲಯದಲ್ಲಿ ಪುಸ್ತಕಗಳೇ ಇಲ್ಲ ಎಂದು ತಿಳಿಯುತ್ತದೆ. ಕೌಂಟೆಸ್‌ಗ 'ಛೆ' ಎನಿಸುತ್ತದೆ. ಆದರೆ ಹೆಚ್ಚು ಯೋಚಿಸಿದರೆ ಅವಳಿಗೆ ಆಯಾಸವಾಗುತ್ತದೆ. ಮುಂದೊಂದು ದಿನ, ಧಾರ್ಮಿಕ ಪ್ರಶ್ನೆಗಳನ್ನ ಚರ್ಚಿಸಲು ಅವಳ ಮುಖ್ಯ ಸಲಹಾಧಿ ಕಾರಿಯ ಮನೆಗೆ ಪ್ರಾಸಂಗಿಕವಾಗಿ ಈ ಅನಾಥ ಮಕ್ಕಳ ಓದಿನ ಹಸಿವನ್ನ ಪ್ರಸ್ತಾಪಿ ಸುತ್ತಾಳೆ. ಸಲಹಾಧಿಕಾರಿಗೆ ಮನಸ್ಸು ನೊಂದ ಹಾಗಾಗುತ್ತದೆ. ತನ್ನ ಮಕ್ಕಳಿ ಗೆಂದು ಪೆಟ್ಟಿಗೆಯಲ್ಲಿ ತಂದಿಟ್ಟ ಪುಸ್ತಕಗಳೇ ಇವೆ. ಆದರೆ ಅವನ್ನ ತಡಕಾಡಿ ತೆಗೆಯುವುದು ಬೇಜಾರಿನ ಕೆಲಸ. ಹೀಗಾಗಿ ಕೆಳವರ್ಗದ ಜನರ ಸೇವೆಗೆಂದೇ ಜೀವನ ಮೀಸಲಿಟ್ಟ ಒಬ್ಬ ಮಹಾತನ ಮನೆಗೆ ಹೋಗಿ ಈ ವಿಷಯ ತಿಳಿಸುತ್ತಾನೆ. ಅವನು ಮರುದಿನವೇ ಹೋಗಿ ಸುಪ್ರಸಿದ್ಧ ದಿನಪತ್ರಿಕೆಯವರಿಗೆ ಈ ಸಂಗತಿ ತಿಳಿಸು ತ್ತಾನೆ. ಕೋಲಾಹಲಕರ ಸುದ್ದಿಗಾಗಿ ಕಾಯುತ್ತಿದ್ದ ಪತ್ರಕರ್ತ 'ಪುಟಾಣಿ ಕಂದಮ್ಮ ಗಳು ಜ್ಞಾನದಾಹಕ್ಕಾಗಿ ಪರಿತಪಿಸುತ್ತಿವೆ' ಎಂಬ ಲೇಖನ ಸಿದ್ಧಪಡಿಸಿ ಸಂತೃಪ್ತಿ ಯಿಂದ ಸಿಳ್ಳು ಹಾಕುತ್ತ ಊಟಕ್ಕೆ ಹೋಗುತ್ತಾನೆ. ಇದಾದ ನಂತರ ಭಾನುವಾರ ಬೀಗ ಜಡಿದ ಪತ್ರಿಕಾಲಯದ ಮುಂದೆ ಕೊಳಕು ಬಟ್ಟೆಯ ಒಬ್ಬ ಬಡವ, ಬಿಳಿಚಿ ಕೃಶವಾದ ಅವನ ಪುಟ್ಟ ಮಗಳು ಒಂದಿಷ್ಟು ಹಳೆಯ ಪುಸ್ತಕಗಳನ್ನು ಹಿಡಿದು ನಿಂತಿದ್ದಾರೆ. ನಮ್ಮ ಲೇಖಕ ಅವರನ್ನ ವಿಚಾರಿಸಿದಾಗ, ಅವರು ಪುಟಾಣಿ ಕಂದಮ್ಮ ಗಳಿಗೆ ಪುಸ್ತಕ ಕೊಡಲು ಬಂದದ್ದು ತಿಳಿಯುತ್ತದೆ. ಅಪ್ಪ ಮಗಳು ಅಂಜುತ್ತ

ಕೈ ಜೋಡಿಸಿ ಪುಸ್ತಕಗಳನ್ನ ಒಪ್ಪಿಸಿ ಹೊರಡುತ್ತಾರೆ. ಪತ್ರಿಕೆಯಲ್ಲಿ ಪ್ರಕಟಿಸುವ ಸಲುವಾಗಿ ಹೆಸರೇನು ಎಂದು ಕೇಳಿದರೆ ಮುಜುಗರದಿಂದ "ಅದೇನು ಬ್ಯಾಡ ಸರ್. ದಯವಿಟ್ಟು. ನಾನೊಬ್ಬ ಬಡವ, ಹ್ಯಾಟ್ ಕಾರ್ಖಾನೆಯಲ್ಲಿ ಕೆಲಸ ಮಾಡ್ತಿದೀನಿ" ಎನ್ನುತ್ತಾನೆ. ತನ್ನ ಈ ವಸುವನ್ನ ತಾನೇ ವ್ಯಾಖ್ಯಾನಿಸುತ್ತ ಕತೆಗಾರ ಕೊನೆ ಪ್ಯಾರಾದಲ್ಲಿ ಹೀಗೆ ಹೇಳುತ್ತಾನೆ. "ನನಗೆ ಒಂದು ಹೊಸಕ್ರಮದಲ್ಲಿ ತಂತಿ ಸುದ್ದಿ ಕಳಿಸುವ ಯೋಚನೆ ಬಂತು. ಮುಖ್ಯ ತಂತಿ ಕಛೇರಿ ಅನಾಥಾಲಯ–ಹ್ಯಾಟ್ ಫ್ಯಾಕ್ಟರಿಯ ಆ ಬಡ ಕೆಲಸಗಾರ ಸ್ವೀಕಾರ ಕೇಂದ್ರ. ಮುಖ್ಯ ಕೇಂದ್ರ ಅಟೆನ್‌ಷನ್ ಎಂದು ಸಂಜ್ಞೆ ಕೊಟ್ಟಾಗ ಸ್ವೀಕಾರ ಕೇಂದ್ರ ತಕ್ಷಣವೆ ಪಡಿಮಿಡಿದು ಪ್ರತಿಕ್ರಿಯೆ ವ್ಯಕ್ತಪಡಿಸುತ್ತದೆ. ಒಂದು 'ಬೇಕು' ಅಂದಾಗ ಇನ್ನೊಂದು 'ಇಕೊ ತೆಗೆದುಕೊ, ಅನ್ನುತ್ತದೆ. ಉಳಿದ ನಾವೆಲ್ಲರು ತಂತಿ ಕಂಬಗಳು."

ಮಿದುಳಿನಲ್ಲಿ ಮಾನವೀಯತೆಯ ತರಂಗಗಳನ್ನೆಬ್ಬಿಸುವ ಈ ಕಥೆ ಎರಡು ಮುಖ್ಯ ಸಂಗತಿಗಳನ್ನ ಸಾರುತ್ತದೆ. ಮೊದಲನೆಯದಾಗಿ ದೀನರ ಎದೆ ಬಡಿತ ದೀನರಿಗೆ ಮಾತ್ರ ಕೇಳಿಸುತ್ತದೆ ಎಂಬುದು ; ಸುಲಭವಾಗಿ ದಕ್ಕಿದ ಹಣದಲ್ಲಿ, ಐಷಾರಾಮುದಲ್ಲಿ ತೇಲುವವರಿಗೆ ಆ ಎದೆ ಬಡಿತ ಕೇಳಿಸುವುದೇ ಇಲ್ಲ. ಅವರ ಎದೆಕದಗಳನ್ನ ಅವು ತಟ್ಟುವುದೆ ಇಲ್ಲ ಎಂಬುದು ಎರಡನೆಯದಾಗಿ ಕ್ರಿಯಾಶಾಲಿಗಳಾಗುವುದು, ನೆರೆಹೊರೆಯವರ ಬೇಕು ಬೇಡಗಳಿಗೆ ಕಷ್ಟಗಳಿಗೆ ತುಡಿಯುವುದು ಅಂಥದೆ ಕಷ್ಟ ಅನುಭವಿಸಿದ ಬಡವರಿಗೆ ಮಾತ್ರ ಸಾಧ್ಯ ಎಂಬುದು. .ಪರೋಕ್ಷವಾಗಿ ಇದು ಬದಲಾವಣೆ ಕುರಿತೂ ಹೇಳುವಂತಿವೆ. ಬಡವರು ದೀನರು ದಲಿತರು ಶೋಷಿತರು ನೋವುಉಂಡುವರು ಮಾತ್ರ ಬದಲಾವಣೆ ತರುವ ದಿಕ್ಕಿನಲ್ಲಿ ಕ್ರಿಯಾಶಾಲಿಗಳಾಗಬಲ್ಲರೆ ಹೊರತು ಮಧ್ಯಮ ವರ್ಗದವರಲ್ಲ. ಹೊಟ್ಟೆ ತುಂಬಿದ ಮಂದಿಯ ಮರುಕವೂ ಅಸಹ್ಯವಾಗಿರಬಲ್ಲದು, ಅಪ್ರಾಮಾಣಿಕವಾಗಿರಬಲ್ಲದು. ಹೆಚ್ಚೆಂದರೆ ಮಧ್ಯಮ ವರ್ಗದವರು ಸಂದೇಶವಾಹಕ ಕಂಬಗಾಳಾದಾರು ಅಷ್ಟೆ. ನಮ್ಮ ಇಡೀ ನಡಾವಳಿಯ ಪ್ರತಿಯೊಂದು ಹೆಜ್ಜೆಯೂ ನಮ್ಮ ನಮ್ಮ ಆರ್ಥಿಕ ಮಟ್ಟ ಹಾಗೂ ಅದರಿಂದ ಉಗಮವಾಗುವ ಮನೋಭಾವನ್ನವಲಂಬಿಸಿದೆ ಎಂದು ಸೂಚಿಸುವ ಇದು ಒಂದು ಶ್ರೇಷ್ಠ ಕಥೆ.

ಈ ಮಾನವೀಯ ತುಡಿತ ಎಂಥ ಉದಾತ್ತತೆಗೆ ತ್ಯಾಗಕ್ಕೆ ಒಯ್ಯುತ್ತದೆ ಎನ್ನು ವುದಕ್ಕೆ 'ಪದಕ' (ಸಂ.7) 'ಕೊನೆಯ ಎಲೆ' (ಸಂ. 13) ಕತೆಗಳನ್ನೂ ಅಂಥ ತುಡಿತದ ಅಭಾವದಿಂದ ಎಂಥ ಹಿಂಸೆ ಸಾಧ್ಯ ಎಂಬುದಕ್ಕೆ 'ಪಾಶ' (ಸಂ. 21), 'ಮುಸ್ತಾಫಾ ಮಜದರ್' (ಸಂ. 12), 'ಸುಭಾಷಿಣಿ', (ಸಂ. 5) ಮತ್ತು 'ಬೂದು ಬಣ್ಣದ ಕಾಂಗರೂ' ಕಥೆಗಳನ್ನೂ ನೋಡಬಹುದು.



## ವಿಚಾರ

---

ಮಾನವ ಜನಾಂಗಕ್ಕೂ; ನಿಸರ್ಗಕ್ಕೂ ಹಾನಿಕಾರಕವೆಂದು ನಿರ್ಧರಿಸಲ್ಪಟ್ಟಿರುವ ಸರಕುಗಳು, ಔಷಧಿಗಳೂ ಸೇರಿದಂತೆ ಇತರ ರಾಸಾಯನಿಕ ವಸ್ತುಗಳು ಹಾಗೂ ತಂತ್ರಜ್ಞಾನವನ್ನು ಬಡರಾಷ್ಟ್ರಗಳಲ್ಲಿ ಸುರಿದು ಕೋಟ್ಯಾಂತರ ಡಾಲರುಗಳನ್ನು ಖಾಸಗಿ ಕಂಪನಿಗಳು ಸಂಪಾದಿಸುತ್ತಿರುವುದು ಒಂದು ಆತಂಕಕಾರಿ ಬೆಳವಣಿಗೆ ಸ್ವದೇಶಗಳಲ್ಲಿ ಬಹಿಷ್ಕರಿಸಿರುವ ಈ ಸರಕುಗಳನ್ನು ಬಡರಾಷ್ಟ್ರಗಳಲ್ಲಿ ಮಾರಾಟ ಮಾಡಿ ಲಾಭಗಳಿಸುವ ಪ್ರಯತ್ನ ಮಾನವ ಜನಾಂಗವನ್ನು ಬಲಿಪಶುವನ್ನಾಗಿಸುವ ಯತ್ನ ಕೂಡ. ಉದಾಹರಣೆಗೆ 'ಟ್ರಿಸ್' ರಾಸಾಯನಿಕ ವಸ್ತುವಿನಿಂದ ಪರಿಷ್ಕರಿಸಿದ ಮಕ್ಕಳ ಉಡುಗೆಗಳನ್ನು ಪರಿಣತರ ಸಲಹೆಯಂತೆ 1977ರಲ್ಲಿ ಅಮೆರಿಕದಲ್ಲಿ ಮಾರಾಟ ಮಾಡುವುದನ್ನು ಬಹಿಷ್ಕರಿಸಲಾಯಿತು. ಆದರೆ ಉಡುಪು ತಯಾರಿಸುವ ಅಮೆರಿಕಾ ಕಂಪೆನಿಗಳು ಈ ಉಡುಗೆಗಳನ್ನು ವಿಶ್ವದ ಹಿಂದುಳಿದ ರಾಷ್ಟ್ರಗಳಲ್ಲಿ ಮಾರಾಟ ಮಾಡಿದವು. ಹಾಗೆಯೇ ಲೆಪ್ಟೋಪೋಸ್ ಎಂಬ ಬಹಿಷ್ಕೃತ ರಾಸಾಯನಿಕ ಕ್ರಿಮಿನಾಶಕ ಈಜಿಪ್ಟಿಗೆ ರಫ್ತಾದಾಗ ಸಾವಿರಕ್ಕೂ ಹೆಚ್ಚು ನೀರೆಮ್ಮೆಗಳು ಬಲಿಯಾದವು. ಗಂಡಾಂತರಕಾರಿಯೆಂದು ಅಮೆರಿಕಾದಲ್ಲಿ, 1975ರಲ್ಲಿ ನಿಷೇಧಿಸಲ್ಪಟ್ಟ ಡಾಲ್ಕಂಸ್ ಗರ್ಭನಿರೋಧಕ ವಂಕಿಗಳು ಮಾರಾಟವಾಗಿ 40 ಬಡರಾಷ್ಟ್ರಗಳ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸೇರಿದವು. ಇತ್ತೀಚಿಗೆ ಭಾರತ ಸರ್ಕಾರ ವಿದೇಶಿ ಕಂಪೆನಿಗಳು ಉತ್ಪಾದಿಸುವ ಹಲವು ಔಷಧಿಗಳನ್ನು ನಿಷೇಧಿಸಿತು. ಇವು ಕೇವಲ ಒಂದೆರೆಡು ಉದಾಹರಣೆಗಳು ಮಾತ್ರ.

ಇಂತಹ ದುರ್ವ್ಯವಹಾರಗಳು ಅಮೆರಿಕದಿಂದ ಮಾತ್ರ ನಡೆಯುತ್ತಿವೆ ಎಂದು ಭಾವಿಸುವುದು ತಪ್ಪು. ಪೂರ್ವ ಯೂರೋಪಿನ ಕೆಲವು ಸಮಾಜವಾದೀ ರಾಷ್ಟ್ರಗಳೂ ಸೇರಿದಂತೆ ಅನೇಕ ಶ್ರೀಮಂತ ದೇಶಗಳು ಈ ಕಗ್ಗೊಲೆಯ ವ್ಯವಹಾರಗಳಲ್ಲಿ ಪಾಲ್ಗೊಳ್ಳುತ್ತಿವೆ. ಬಡರಾಷ್ಟ್ರಗಳಲ್ಲಿನ ಸರ್ಕಾರಗಳನ್ನೇ ಉರುಳಿಸಬಲ್ಲ ಬಹು ರಾಷ್ಟ್ರೀಯ ಕಂಪನಿಗಳು ತಮ್ಮ ವ್ಯವಹಾರಗಳಲ್ಲಿ ಅನುಸರಿಸದ ಮಾರ್ಗಗಳೇ ಇಲ್ಲ. ಈ ಗಂಡಾಂತರಕಾರಿ ಪ್ರವೃತ್ತಿಯ ವಿರುದ್ಧ ಸಾರ್ವಜನಿಕ ಅಭಿಪ್ರಾಯವೂ ಬೆಳೆಯುತ್ತಿದೆ. ಆದರೆ ವಿಶ್ವದಾದ್ಯಂತ ತಮ್ಮ ಜಾಲವನ್ನು ಹರಡಿರುವ ಈ ಬೃಹತ್ ಕಂಪನಿಗಳ ಕುಟಿಲತೆಯ ಮುಂದೆ ಬಡರಾಷ್ಟ್ರಗಳ ಸಮ್ಮೇಳನಗಳು, ಘೋಷಣೆಗಳು ಮತ್ತು ಕರೆಗಳು ನಿರುಪಯುಕ್ತವೆನಿಸಿವೆ. ಸಾರ್ವಜನಿಕ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟು ಅಮೆರಿಕಾದ ಅಧ್ಯಕ್ಷರಾಗಿದ್ದ ಜಿಮ್ಮಿ ಕಾರ್ಟರ್ ತಮ್ಮ ಅಧಿಕಾರಾವಧಿ ಮುಗಿಯುವುದಕ್ಕೆ ಒಂದು ವಾರ ಮುಂಚೆ ಗಂಡಾಂತರಕಾರಿಯೆಂದು ತೀರ್ಮಾನಿಸಲ್ಪಟ್ಟ ಎಲ್ಲ ವಸ್ತುಗಳ ಪಟ್ಟಿಯನ್ನು ವಿಶ್ವದ ಎಲ್ಲಾ ರಾಷ್ಟ್ರಗಳ ಗಮನಕ್ಕೆ ತರಲೇ ಬೇಕೆಂಬ ಆಜ್ಞೆಯನ್ನು ಹೊರಡಿಸಿದರು. ಆದರೆ 35 ದಿನಗಳ ನಂತರ ರೊನಾಲ್ಡ್ ರೀಗನ್ ಈ ಆಜ್ಞೆಯನ್ನು ರದ್ದುಪಡಿಸುವ ಮತ್ತೊಂದು ಆಜ್ಞೆಯನ್ನು ಹೊರಡಿಸಿದರು. ಇದಕ್ಕೆ ಕಾರಣವೇನಿರಬಹುದು ?

–ದಡ್ಡ



# ಹಿಂದುಳಿದವರ ಹಿತರಕ್ಷಣೆ

★ ಸರ್ವರಿಗೂ ಸಮಾನ ಅವಕಾಶ; ದೌರ್ಜನ್ಯಗಳಿಂದ ದಲಿತ ರಕ್ಷಣೆ – ಇದು ಸರ್ಕಾರದ ಗುರಿ.

★ ಹರಿಜನ – ಗಿರಿಜನರ ಉದ್ಧಾರಕ್ಕಾಗಿ ನೇಮಕಗೊಂಡ ಹರಿಜನ–ಗಿರಿಜನ ಕಾರ್ಪೊರೇಷನ್ ತೀವ್ರ ಕಾರ್ಯನಿರತ.

★ ಹಿಂದುಳಿದ ವರ್ಗದವರಿಗೆ ಶಿಕ್ಷಣ ಮತ್ತು ಸರ್ಕಾರಿ ಸೇವೆಯಲ್ಲಿ ಸೂಕ್ತ ಪ್ರಾತಿನಿಧ್ಯ.

★ ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪಸಂಖ್ಯಾತ ಆಯೋಗಗಳ ರಚನೆ.

★ ದಲಿತರ ಮೇಲೆ ಆಗುವ ದೌರ್ಜನ್ಯಗಳನ್ನು ತಪ್ಪಿಸಲು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟರಿಗೆ ಹೆಚ್ಚಿನ ಅಧಿಕಾರ.

★ ಕೋಮು ಗಲಭೆಗಳನ್ನು ಹತ್ತಿಕ್ಕಿ ಸೌಹಾರ್ದತೆಯನ್ನು ಕಾಯಲು ರಾಜ್ಯ ಹಾಗೂ ತಾಲ್ಲೂಕು ಮಟ್ಟದಲ್ಲಿ ಸಮಿತಿಗಳ ರಚನೆ.

ಪ್ರಕಟಣೆ : 'ಕರ್ನಾಟಕ ವಾರ್ತೆ'